ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಕರ್ತವ್ಯಕ್ಕೆ ಹಾಜರಾತಿ ಸಲ್ಲಿಸಿದ್ದಾರೆ. ತದ ನಂತರ ಅವರು ಮೇಲೆ ಕ್ರ.ಸಂ. 1 ಮತ್ತು 2 ರಲ್ಲಿ ಓದಲಾದ ಅಧಿಸೂಚನೆಗೆ ಅನುಸಾರವಾಗಿ ದಿನಾಂಕ: 01.09.2006 ರಿಂದ 30.11.2006 ರವರೆಗೆ ಗಳಿಕೆ ರಜೆಯನ್ನು ಉಪಯೋಗಿಸಿಕೊಂಡಿದ್ದಾರೆ. ನಂತರ ಮೇಲೆ ಕ್ರಮ ಸಂಖ್ಯೆ: 3 ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯ ಮೇರೆಗೆ ಶ್ರೀಮತಿ ಉಮಾ ಮಹಾದೇವನ್, ಐ.ಎ.ಎಸ್., Member Secretary, TIFR Endowment Fund, Tata Institute of Fundamental Research, Mumbai ಇವರು ದಿನಾಂಕ: 04.12.2006 ರಿಂದ ಈ ಹುದ್ದೆಯಲ್ಲಿ ಅಧಿಕಾರ ವಹಿಸಿಕೊಂಡಿರುತ್ತಾರೆ. ಅವರು ದಿನಾಂಕ: 01.12.2006 ರಿಂದ 03.12.2006 ರವರೆಗೆ ಸೇರುವಿಕೆ ಕಾಲವನ್ನು ಉಪಯೋಗಿಸಿಕೊಂಡಿರುವುದಾಗಿ ತಿಳಿಸಿದ್ದಾರೆ. ಆದ್ದರಿಂದ ದಿನಾಂಕ: 29.04.2006 ರಿಂದ 31.08.2006 ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸುವ ನಿಟ್ಟಿನಲ್ಲಿ ಸೂಕ್ತ ಆದೇಶ ಹೊರಡಿಸುವುದು ಅಗತ್ಯವಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 581 ಸೆಅಸೆ 2006, ಬೆಂಗಳೂರು, ದಿನಾಂಕ: 5ನೇ ಜನವರಿ 2007**

ಶ್ರೀಮತಿ ಉಮಾ ಮಹಾದೇವನ್, ಐ.ಎ.ಎಸ್. ಇವರು ದಿನಾಂಕ: 29.04.2006 ರಿಂದ 31.08.2006 ರವರೆವಿಗೆ (ಉದಿಸೇ) ಕಳೆದ ಅವಧಿಯನ್ನು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 8(15(ಎಫ್)ನ ಮೇರೆಗೆ ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ ಮತ್ತು ದಿನಾಂಕ: 01.12.2006 ರಿಂದ 03.12.2006 ರವರೆಗೆ ಕಳೆದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 78ರ ಮೇರೆಗೆ ಸೇರುವಿಕೆಯ ಕಾಲ ಎಂದು ಪರಿಗಣಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಲಾದ ವಿತ್ತಾಧಿಕಾರದಾನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 45

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1).

**ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** 2006-07ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಸಹಾಯಾನುಧಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 20 ಎಲ್‌ಎಡಿ 2006, ದಿನಾಂಕ: 03.07.2006.
2) ಸರ್ಕಾರಿ ಆದೇಶ ಸಂಖ್ಯೆ: ಲಾ 20 ಎಲ್‌ಎಡಿ 2006, ದಿನಾಂಕ: 29.09.2006.
3) ಪತ್ರ ಸಂಖ್ಯೆ: ಕರಾಕಾಸೇಪ್ರಾ 22 ಬಜೆಟ್ 2006-07, ದಿನಾಂಕ: 17.10.2006.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ವಿವಿಧ ಕಾರ್ಯಕ್ರಮಗಳಿಗೆ 2006-07ನೇ ಸಾಲಿನಲ್ಲಿ ರೂ.110.24 ಲಕ್ಷಗಳ ಮೊತ್ತದ ಆಯವ್ಯಯ ಒದಗಿಸಿಕೊಳ್ಳಲಾಗಿದ್ದು, ಈ ಮೊತ್ತದಲ್ಲಿ ಮೇಲೆ (1) ಮತ್ತು (2) ರಲ್ಲಿ ಓದಲಾದ ಆದೇಶಗಳಲ್ಲಿ ಒಟ್ಟು ರೂ.56.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು.

ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ ಇವರು ಮೇಲೆ (3) ರಲ್ಲಿ ಓದಲಾದ ಪತ್ರ ಬರೆಯುತ್ತಾ, ಉಳಿದ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 20 ಎಲ್‌ಎಡಿ 2006, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2006**

ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ 2006-07ನೇ ಸಾಲಿನಲ್ಲಿ ಅಂತಿಮ ಕಂತಾಗಿ ರೂ.54.24 ಲಕ್ಷಗಳ ಮೊತ್ತದ (ರೂಪಾಯಿ ಐವತ್ನಾಲ್ಕು ಲಕ್ಷ ಇಪ್ಪತ್ನಾಲ್ಕು ಸಾವಿರಗಳನ್ನು ಮಾತ್ರ) ಸಹಾಯಾನುಧಾನವನ್ನು ಈ ಕೆಳಗಿನ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ:-

- ಯೋಜಿತ ಕಾರ್ಯಕ್ರಮಗಳ ಅನುಷ್ಠಾನಗೊಳಿಸಿರುವುದರ ವರದಿ ಸಲ್ಲಿಸುವುದು.
- ಪ್ರಸ್ತುತ ಸಾಲಿಗೆ ಬಿಡುಗಡೆ ಮಾಡಿರುವ ಸಹಾಯಾನುಧಾನವನ್ನು ವಿನಿಯೋಗಿಸಿಕೊಂಡಿರುವ ಕುರಿತಂತೆ ಪ್ರಮಾಣ ಪತ್ರ ಸಲ್ಲಿಸುವುದು.

ಈ ಸಂಬಂಧದ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2235-60-200-5-01-(101-ಸಹಾಯಾನುಧಾನ) ಇದರಡಿ ಭರಿಸುವುದು.

ಇದಕ್ಕೆ ಆರ್ಥಿಕ ಇಲಾಖೆ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 101 ವೆಚ್ಚ-7:06, ದಿನಾಂಕ: 26.12.2006 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಶಿವಾನಂದ**

ಪಿ.ಆರ್. 49

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**INFRASTRUCTURE DEVELOPMENT SECRETARIAT**

**CORRIGENDUM**

**No. IDD 80 DIA 2006, Bangalore, Dated: 3rd January 2007**

**Subject:** Release of funds for fencing up of land retained by GoK abutting the BIAP Site.

**Read:** G.O.No. IDD 80 DIA 2006, dated: 20.12.2006.

**PREAMBLE:**

The Head of Account "5465-01-190-2-07-211" appearing in para No.(3) of the order portion of the Government Order referred above shall be substituted and read as the Head of Account "5465-01-190-2-07-051".

By Order and in the name of the Governor of Karnataka,

**N. MANJULA GEETHA**

P.R. 46

Under Secretary to Government,

Infrastructure Development Department.

**ಶಿಕ್ಷಣ ಸಚಿವಾಲಯ**

**ವಿಷಯ:** 2006–07ನೇ ಶೈಕ್ಷಣಿಕ ಸಾಲಿಗೆ ಅಫಜಲಪೂರದ ಶ್ರೀ ಮಹಾಂತೇಶ್ವರ ವಿದ್ಯಾವರ್ಧಕ ಸಂಘದ ಶಿಕ್ಷಣ ಕಾಲೇಜಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಇಡಿ 182 ಯುಜಿವಿ 2004, ದಿನಾಂಕ: 07.03.2005.

2) NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ ಸಂಖ್ಯೆ: F.SRO/NCTE/B.Ed/2005-06/6574, ದಿನಾಂಕ: 21ನೇ ಜೂನ್ 2006.

3) ಶ್ರೀ ಮಹಾಂತೇಶ್ವರ ವಿದ್ಯಾವರ್ಧಕ ಸಂಘದ ಕಾರ್ಯನಿರ್ವಾಹಕ ನಿರ್ದೇಶಕರ ಪತ್ರ ಸಂಖ್ಯೆ: ಬಿ.ಎಡ್/ಅನುಮತಿಗಾಗಿ/2006–07/02, ದಿನಾಂಕ: 26.06.2006.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಅಫಜಲಪೂರದ ಶ್ರೀ ಮಹಾಂತೇಶ್ವರ ವಿದ್ಯಾವರ್ಧಕ ಸಂಘದ ಶಿಕ್ಷಣ ಕಾಲೇಜಿಗೆ ಬಿ.ಎಡ್. ಕೋರ್ಸನ್ನು 100 (ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ: 21.06.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2006–07ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ದಿನಾಂಕ: 26.06.2006ರ ಪತ್ರದಲ್ಲಿ ಸದರಿ ಸಂಘದ ಕಾರ್ಯನಿರ್ವಾಹಕ ನಿರ್ದೇಶಕರು ಅಫಜಲಪೂರದ ಶ್ರೀ ಮಹಾಂತೇಶ್ವರ ವಿದ್ಯಾವರ್ಧಕ ಸಂಘದ ಶಿಕ್ಷಣ ಕಾಲೇಜು ಈ ಸಂಸ್ಥೆಗೆ ಬಿ.ಎಡ್. ಕೋರ್ಸನ್ನು 100 ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 170 ಯುಜಿವಿ 2006, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಫಜಲಪೂರದ ಶ್ರೀ ಮಹಾಂತೇಶ್ವರ ವಿದ್ಯಾವರ್ಧಕ ಸಂಘದ ಶಿಕ್ಷಣ ಕಾಲೇಜಿಗೆ ಬಿ.ಎಡ್. ಕೋರ್ಸಿಗೆ 2006–07ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ**

ಪಿ.ಆರ್. 50

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

**ಸಹಕಾರ ಸಚಿವಾಲಯ**

**ವಿಷಯ:** ಕಾರ್ಕಳ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ/115/ಎಂಆರ್ಇ/95, ದಿನಾಂಕ: 10.11.1997.
2) ಸರ್ಕಾರದ ಆದೇಶ ಸಂಖ್ಯೆ: ಸಇ/306/ಮಾಇಸೇ/2005, ದಿನಾಂಕ: 21.08.2006.
3) ಹೆಚ್ಚುವರಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕೃಮಾಇ/281/ಸಿಬ್ಬಂದಿ-1(ಸಿ)/06, ದಿನಾಂಕ: 26.09.2006.

**ಪ್ರಸ್ತಾವನೆ:**

ಕೃಷಿ ಮಾರಾಟ ಇಲಾಖೆಯು ದಿನಾಂಕ: 26.09.2006ರ ಪ್ರಸ್ತಾವನೆಯಲ್ಲಿ ಮೇಲೆ ಓದಲಾದ ಕ್ರಮಾಂಕ (1) ರಲ್ಲಿನ ಆದೇಶಾನುಸಾರ ಕಾರ್ಕಳ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 8 ಹುದ್ದೆಗಳನ್ನು ಸೃಷ್ಟಿಸಿ ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು. ಮೇಲೆ ಓದಲಾದ (2) ರಲ್ಲಿನ ದಿನಾಂಕ: 21.08.2006ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 31.10.2006 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ: 01.11.2006 ರಿಂದ ಖಾಯಂಗೊಳಿಸಲು ಅಥವಾ ಖಾಯಂಗೊಳಿಸುವ ಪ್ರಕ್ರಿಯೆ ವಿಳಂಬವಾದಲ್ಲಿ ಪುನಃ 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರು ಪ್ರಸ್ತಾಪಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 334 ಮಾಇಸೇ 2006, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಕಾರ್ಕಳ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 01.11.2006 ರಿಂದ 31.10.2007 ರವರೆವಿಗೆ ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ:-

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯದರ್ಶಿ | 1 |
| 2 | ಸಹಾಯಕ ಕಾರ್ಯದರ್ಶಿ | 1 |
| 3 | ಆಂತರಿಕ ಲೆಕ್ಕ ಪರಿಶೋಧಕರು | 1 |
| 4 | ಲೆಕ್ಕಿಗ | 1 |
| 5 | ಬೆರಳಚ್ಚುಗಾರರು | 1 |
| 6 | ವಾಹನ ಚಾಲಕರು | 1 |
| 7 | ಸಿಪಾಯಿ | 2 |
| | **ಒಟ್ಟು** | **8** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ ಸಂಖ್ಯೆ: "3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ)"ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅವಧಿಕೃತ ಟಿಪ್ಪಣಿ ಸಂಖ್ಯೆ: ಸಇ/409/ಅಂಆಸ/2006, ದಿನಾಂಕ: 24.11.2006 ಮತ್ತು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/01/ಟಿಎಫ್‌ಟಿ/96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್. 52 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಲಿಂಗಸಗೂರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ/86/ಎಂಎಂಡಿ/90, ದಿನಾಂಕ: 23.09.1993.
2) ಸರ್ಕಾರದ ಆದೇಶ ಸಂಖ್ಯೆ: ಸಇ/224/ಮಾಇಸೇ/2005, ದಿನಾಂಕ: 16.05.2006.
3) ಹೆಚ್ಚುವರಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕೃಮಾಇ/274/ಸಿಬ್ಬಂದಿ-1(ಸಿ)/06, ದಿನಾಂಕ: 26.09.2006.

**ಪ್ರಸ್ತಾವನೆ:**

ಕೃಷಿ ಮಾರಾಟ ಇಲಾಖೆಯು ದಿನಾಂಕ: 20.09.2006ರ ಪ್ರಸ್ತಾವನೆಯಲ್ಲಿ ಮೇಲೆ ಓದಲಾದ ಕ್ರಮಾಂಕ (1) ರಲ್ಲಿನ ಆದೇಶಾನುಸಾರ ಲಿಂಗಸಗೂರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 8 ಹುದ್ದೆಗಳನ್ನು ಸೃಷ್ಟಿಸಿ ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು. ಮೇಲೆ ಓದಲಾದ (2) ರಲ್ಲಿನ ದಿನಾಂಕ: 16.05.2006ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 31.10.2006 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ: 01.11.2006 ರಿಂದ ಖಾಯಂಗೊಳಿಸಲು ಅಥವಾ ಖಾಯಂಗೊಳಿಸುವ ಪ್ರಕ್ರಿಯ ವಿಳಂಬವಾದಲ್ಲಿ ಪುನಃ 2 ವರ್ಷಗಳ ಅವಧಿಗೆ

ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರು ಪ್ರಸ್ತಾಪಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 335 ಮಾಇಸೇ 2006, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಲಿಂಗಸಗೂರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 01.11.2006 ರಿಂದ 31.10.2007 ರವರೆವಿಗೆ ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ:-

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯದರ್ಶಿ | 1 |
| 2 | ಲೆಕ್ಕಿಗರು | 1 |
| 3 | ದ್ವಿತೀಯ ದರ್ಜೆ ಸಹಾಯಕರು | 2 |
| 4 | ಬೆರಳಚ್ಚುಗಾರರು | 1 |
| 5 | ಮಾರುಕಟ್ಟೆ ಮೇಲ್ವಿಚಾರಕರು ದರ್ಜೆ-3 | 3 |
| | **ಒಟ್ಟು** | 8 |

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ ಸಂಖ್ಯೆ: "3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ)"ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅವಧಿಕೃತ ಟಿಪ್ಪಣಿ ಸಂಖ್ಯೆ: ಸಇ/409/ಅಂಅಸ/2006, ದಿನಾಂಕ: 24.11.2006 ಮತ್ತು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/01/ಟಿಎಫ್‌ಟಿ/96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆ ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್. 53 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ವೈದ್ಯರ ಸೇವೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 141 ಪಿಐಎಂ 2006, ದಿನಾಂಕ: 16.03.2005.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 70 ಪಿಐಎಂ 2004, ದಿನಾಂಕ: 02.02.2006.

3) ನಿರ್ದೇಶಕರು, ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆ ಇವರ ಪತ್ರ ಸಂಖ್ಯೆ: ಭಾವೈಪ:19:ಸಿ(4)2005-06, ದಿನಾಂಕ: 05.07.2005 ಮತ್ತು 31.08.2006.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ವಿವಿಧ ಪದ್ಧತಿಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ 162 ವೈದ್ಯರುಗಳನ್ನು ದಿನಾಂಕ: 17.11.2002 ರಿಂದ ಎರಡು ವರ್ಷಗಳ ಅವಧಿಗೆ ಅಥವಾ ಈ ಹುದ್ದೆಯನ್ನು ಕ್ರಮಬದ್ಧವಾಗಿ ತುಂಬುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

ಮೇಲೆ ಕ್ರ.ಸಂ.(2) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ 90 ಗುತ್ತಿಗೆ ವೈದ್ಯರನ್ನು ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

ಮೇಲೆ ಕ್ರ.ಸಂ. (3) ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ 9 ಗುತ್ತಿಗೆ ವೈದ್ಯರು ವಿಶೇಷ ನೇಮಕಾತಿ ಹಾಗೂ ಬ್ಯಾಕ್‌ಲಾಗ್ ಹುದ್ದೆಗಳ ನೇಮಕಾತಿಯಲ್ಲಿ ಆಯ್ಕೆಯಾಗಿ ಈ ಹುದ್ದೆಗಳಿಂದ ಬಿಡುಗಡೆ ಹೊಂದಿರುವುದರಿಂದ ಪ್ರಸ್ತುತ 63 ಗುತ್ತಿಗೆ ವೈದ್ಯರುಗಳು (ಅನುಬಂಧದಲ್ಲಿರುವ) ಕಾರ್ಯನಿರ್ವಹಿಸುತ್ತಿದ್ದು, ಇವರುಗಳು ಗ್ರಾಮಾಂತರ ಪ್ರದೇಶಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವುದರಿಂದ ಚಿಕಿತ್ಸಾಲಯಕ್ಕೆ ಬರುವ ರೋಗಿಗಳ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಇವರನ್ನು ದಿನಾಂಕ: 17.11.2004 ರಿಂದ ಮೂರು ವರ್ಷಗಳ ಅವಧಿಗೆ ಅಥವಾ ಕರ್ನಾಟಕ ಲೋಕ ಸೇವಾ ಆಯೋಗದಿಂದ ಕ್ರಮಬದ್ಧವಾಗಿ ಈ ಹುದ್ದೆಗಳನ್ನು ತುಂಬುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸುವಂತೆ ಕೋರಿರುತ್ತಾರೆ. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 376 ಪಿಐಎಂ 2005, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ವಿವಿಧ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಆಯುರ್ವೇದ, ಹೋಮಿಯೋಪತಿ, ಯುನಾನಿ ಪದ್ಧತಿಗಳಲ್ಲಿ ನೇಮಕಗೊಂಡ ಗುತ್ತಿಗೆ ವೈದ್ಯರುಗಳ 5 ವರ್ಷಗಳ ಸೇವೆಯನ್ನು ಪೂರ್ಣಗೊಳ್ಳದೆ 63 ಗುತ್ತಿಗೆ ವೈದ್ಯರುಗಳ (ಅನುಬಂಧ ಲಗತ್ತಿಸಿದೆ)

ಸೇವೆಯನ್ನು ದಿನಾಂಕ: 17.11.2004 ರಿಂದ ಎರಡು ವರ್ಷದ ಅವಧಿಗೆ ಅಥವಾ ಈ ಹುದ್ದೆಗಳನ್ನು ಕ್ರಮಬದ್ಧವಾಗಿ ತುಂಬುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗೆ (ಸೇವಾನಿಯಮಗಳು-1) ಇವರ ಟಿಪ್ಪಣಿ ಸಂಖ್ಯೆ: ಸಿಆಸುಇ/435/ಸೇನಿವಿ/2006, ದಿನಾಂಕ: 21.10.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ANNEXURE**

**DEPARTMENT OF AYUSH - LIST OF CONTRACT DOCTORS**

| Sl. No. | Name of the Doctors | Govt. Order No. and Date | Date of Duty Report |
|---|---|---|---|
| 1 | Dr. Eranna | HFW/134/PIM/2001, Dt: 11.07.2001 | 29.08.2001 |
| 2 | Dr. Suchitra | - " - | 27.08.2001 |
| 3 | Dr. Nirupama M.K. | - " - | 29.08.2001 |
| 4 | Dr. K. Kumar | HFW/16/PIM/2001, Dt: 27.08.2001 | 27.09.2001 |
| 5 | Dr. Reshma Faharna | - " - | 27.09.2001 |
| 6 | Dr. Shashidhar Yellappa Makkalageri | HFW/04/PIM/2001, Dt: 16.08.2001 | 28.08.2001 |
| 7 | Dr. Galagali Sanjeeva Mohan | - " - | 30.08.2001 |
| 8 | Dr. yogesh M. Madagavkar | - " - | 03.09.2001 |
| 9 | Dr. Santosh Tadapatri | HFW/190/PIM/2001, Dt: 29.08.2001 | 17.09.2001 |
| 10 | Dr. Mangala | HFW/632/PIM/2000, Dt: 16.08.2001 | 26.09.2001 |
| 11 | Dr. Bheemana Gowda Savajji | - " - | 28.09.2001 |
| 12 | Dr. Arundathi | - " - | 29.09.2001 |
| 13 | Dr. Asha Chandranath | HFW/362/PIM/2000, Dt: 17.08.2001 | 05.09.2001 |
| 14 | Dr. Somashekar | - " - | 19.09.2001 |
| 15 | Dr. Vaishali | HFW/497/PIM/2000, Dt: 31.08.2001 | 01.10.2001 |
| 16 | Dr. Ananda | HFW/144/PIM/2000, Dt: 30.10.2001 | 17.11.2001 |
| 17 | Dr. A.S. Pushpalatha | HFW/63/PIM/2000, Dt: 09.11.2001 | 18.11.2001 |
| 18 | Dr. S. Nagaraj | - " - | 18.11.2001 |
| 19 | Dr. Hema D. | - " - | 19.11.2001 |
| 20 | Dr. M.V. Rashmi | HFW/134/PIM/2001, Dt: 13.03.2001 | 04.03.2002 |
| 21 | Dr. Komala N. | - " - | 19.03.2002 |
| 22 | Dr. Krishnaprasad | - " - | 24.03.2002 |
| 23 | Dr. Shobha | HFW/40/PIM/2000, Dt: 02.04.2002 | 10.04.2002 |
| 24 | Dr. K.G. Ganesh Bhat | HFW/127/PIM/2000, Dt: 11.04.2002 | 24.07.2002 |
| 25 | Dr. I.V. Hemalatha | - " - | 24.04.2002 |
| 26 | Dr. Sujatha L. Shetty | - " - | 04.05.2002 |
| 27 | Dr. L.R. Gowtham | - " - | 24.04.2002 |
| 28 | Dr. Aravind | - " - | 04.05.2002 |
| 29 | Dr. Parashuram L. Devaragudda | - " - | 26.04.2002 |
| 30 | Dr. Shalini D. | - " - | 24.04.2002 |
| 31 | Dr. Basavaraju R. Thalawar | - " - | 04.05.2002 |
| 32 | Dr. Pitominos | HFW/360/PIM/2000, Dt: 15.05.2002 | 30.05.2002 |
| 33 | Dr. B.M. Lokapur | | 30.05.2002 |
| 34 | Dr. R. Dinesh | HFW/63/PIM/2000, Dt: 17.06.2002 | 26.06.2002 |

| Sl. No. | Name of the Doctors | Govt. Order No. and Date | Date of Duty Report |
|---|---|---|---|
| 35 | Dr. Vittal K. Nayak | | 25.06.2002 |
| 36 | Dr. M.T. Shobhadevi | HFW/40/PIM/2000, Dt: 18.06.2002 | 26.06.2002 |
| 37 | Dr. Sudhakar | HFW/497/PIM/2000, Dt: 23.07.2002 | 07.08.2002 |
| 38 | Dr. Arathi C. Hiremath | HFW/632/PIM/2002, Dt: 09.03.2002 | 07.10.2002 |
| 39 | Dr. Murali Siddanagowda | | 07.10.2002 |
| 40 | Dr. Yogeshwar Gowda | | 26.10.2002 |
| 41 | Dr. K. Varaprasad | | 07.10.2002 |
| 42 | Dr. K. Ramija Begaum | | 05.10.2002 |
| 43 | Dr. B.S. Sarala Devi | | 07.10.2002 |
| 44 | Dr. Madhuri Devi | HFW/632/PIM/2002, Dt: 03.09.2002 | 02.12.2002 |
| 45 | Dr. Prahalladha R.I. | HFW/185/PIM/2000, Dt: 16.11.2002 | 27.12.2002 |
| 46 | Dr. K. Prapulla | HFW/208/PIM/2000, Dt: 16.11.2002 | 23.12.2002 |
| 47 | Dr. Shankarappa Darbi | HFW/556/PIM/2000, Dt: 16.11.2002 | 20.12.2002 |
| 48 | Dr. S.N. Padashetty | | 20.12.2002 |
| 49 | Dr. Vijaya Malkappa Thontapur | HFW/4/PIM/2001, Dt: 15.03.2002 | 20.04.2002 |
| 50 | Dr. Booju Pemu Pujari | HFW/3104/PIM/2001, Dt: 22.02.2002 | 03.04.2002 |
| 51 | Dr. Roopa Hemanth Bhat | HFW/4/PIM/2001, Dt: 02.01.2003 | 14.01.2003 |
| 52 | Dr. Sridhar E. Barakar | HFW/40/PIM/2001, Dt: 19.06.2003 | 03.07.2003 |
| 53 | Dr. Vijayalakshmi | | 03.07.2003 |
| **HOMOEOPATHY** | | | |
| 54 | Dr. Abdul Rajakh | HFW/527/PIM/2000, Dt: 31.07.2001 | 01.09.2001 |
| 55 | Dr. Nabesab Badighav | | 01.09.2001 |
| 56 | Dr. S.S. Ramdurga | HFW/632/PIM/2000, Dt: 16.08.2001 | 20.09.2001 |
| 57 | Dr. Girish Pashupathy Math | HFW/360/PIM/2000, Dt: 29.09.2001 | 12.10.2001 |
| 58 | Dr. Sanjay Kulkarni | HFW/190/PIM/2001, Dt: 01.07.2002 | 25.07.2002 |
| 59 | Dr. Roopa Reddy | | 23.07.2002 |
| 60 | Dr. Rameshchandra | HFW/632/PIM/2000, Dt: 03.09.2002 | 05.10.2002 |
| **UNANI** | | | |
| 61 | Dr. Syed Jainulla Abidin | HFW/497/PIM/2000, Dt: 31.07.2002 | 17.08.2002 |
| 62 | Dr. Kathija Begaum | | 17.08.2002 |
| 63 | Dr. Roopashree | | |

**S.N. KRISHNAKUMAR**
Under Secretary to Government,
Health & Family Welfare Department, (I M D).

P.R. 54

**ಕಂದಾಯ ಸಚಿವಾಲಯ**

**ಸುತ್ತೋಲೆ ಸಂಖ್ಯೆ: ಆರ್‌ಡಿ 479 ಟಿಆರ್‌ಎಂ 2006, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2006**

**ವಿಷಯ:** ಭೂ ಕಂದಾಯ ಮನ್ನಾ ಮಾಡಿರುವ ಮಾಹಿತಿಯನ್ನು ಪ್ರಕಟಿಸುವ ಬಗ್ಗೆ.

ಕರ್ನಾಟಕ ವಿಧಾನ ಮಂಡಲದ ಅಧೀನ ಶಾಸನ ರಚನಾ ಸಮಿತಿಯು ತನ್ನ 27ನೇ ವರದಿಯಲ್ಲಿ ಭೂ ಕಂದಾಯ ಮನ್ನಾ ಮಾಡಿರುವ ಕುರಿತಂತೆ ಮಾಹಿತಿಯನ್ನು ಆಯಾಯ ಜಿಲ್ಲಾ ಕಛೇರಿ ಹಾಗೂ ತಾಲ್ಲೂಕು ಕಛೇರಿಗಳಲ್ಲಿ ಮತ್ತು ಚಾವಡಿಗಳಲ್ಲಿ ತಪ್ಪದೇ ಪ್ರಕಟಿಸಬೇಕೆಂದು, ಈ ರೀತಿ ಮಾಡುವುದರಿಂದ ರೈತರಿಗೆ ತಿಳುವಳಿಕೆ ಮೂಡುವುದರ ಜೊತೆಗೆ ಅವರಿಗೆ ಅನುಕೂಲವಾಗುತ್ತದೆ ಎಂದು ಶಿಫಾರಸ್ಸು ಮಾಡಿರುತ್ತದೆ.

ಆದ್ದರಿಂದ ಭೂ ಕಂದಾಯ ಮನ್ನಾ ಕುರಿತಂತೆ ರಾಜ್ಯದ ಎಲ್ಲಾ ರೈತರಿಗೆ ತಿಳುವಳಿಕೆ ಮೂಡಿಸಲು, ಭೂ ಕಂದಾಯ ಮನ್ನಾ ಮಾಡಿರುವ ಬಗ್ಗೆ ಮಾಹಿತಿಯನ್ನು ಆಯಾಯ ಜಿಲ್ಲೆಯ ಜಿಲ್ಲಾ ಕಛೇರಿ, ತಾಲ್ಲೂಕಿನ ತಾಲ್ಲೂಕು ಕಛೇರಿಗಳಲ್ಲಿ ಮತ್ತು ಗ್ರಾಮ ಪಂಚಾಯಿತಿಗಳ ಚಾವಡಿಗಳಲ್ಲಿ ತಪ್ಪದೇ ಪ್ರಕಟಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ಎಸ್.ಎಂ. ಜಾಮ್‌ದಾರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ.

ಪಿ.ಆರ್. 55

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಸಿ.ಎಂ. ಹಿರೇಮಠ್, ತಹಶೀಲ್ದಾರ್, ಸಿಂಧನೂರು, ಇವರನ್ನು ಈ ಹಿಂದೆ ರೋಣ ತಾಲ್ಲೂಕು ತಹಶೀಲ್ದಾರರಾಗಿದ್ದಾಗ ಮಾಡಿದ ಕರ್ತವ್ಯ ಲೋಪಕ್ಕಾಗಿ ಮಾಡಿದ್ದ ಅಮಾನತ್ತು ಆದೇಶವನ್ನು ತೆರವುಗೊಳಿಸಿ ಪುನಃ ಸ್ಥಳ ನಿಯುಕ್ತಿಗೊಳಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಕಂಇ 56 ಎಡಿಇ 2006, ದಿನಾಂಕ: 31.08.2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 31.08.2006ರ ಸರ್ಕಾರಿ ಆದೇಶದಲ್ಲಿ ಶ್ರೀ ಸಿ.ಎಂ. ಹಿರೇಮಠ್, ತಹಶೀಲ್ದಾರ್, ಸಿಂಧನೂರ್ ತಾಲ್ಲೂಕು, ರಾಯಚೂರು ಜಿಲ್ಲೆ, ಇವರು ಈ ಹಿಂದೆ ಗದಗ್ ಜಿಲ್ಲಾ ರೋಣ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ಮೇಲಿನ ಕರ್ತವ್ಯ ಲೋಪದ ಆರೋಪದ ಹಿನ್ನಲೆಯಲ್ಲಿ ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಡಿ) ರಡಿಯಲ್ಲಿ ಸದರಿ ಆದೇಶದಲ್ಲಿ ತಿಳಿಸಿರುವ ಕಾರಣಗಳಿಗಾಗಿ ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಈ ವಿಷಯವನ್ನು ಪುನರ್ ಅವಲೋಕಿಸಿ, ಅವರನ್ನು ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ಬಿಡುಗಡೆಗೊಳಿಸಲು ಸರ್ಕಾರವು ನಿರ್ಧರಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 56 ಎಡಿಇ 2006, ಬೆಂಗಳೂರು, ದಿನಾಂಕ: 3ನೇ ಜನವರಿ 2007**

ಶ್ರೀ ಸಿ.ಎಂ. ಹಿರೇಮಠ್, ತಹಶೀಲ್ದಾರ್, ಸಿಂಧನೂರು ತಾಲ್ಲೂಕು ಹಾಗೂ ಹಿಂದಿನ ತಹಶೀಲ್ದಾರ್, ರೋಣ ತಾಲ್ಲೂಕು ಗದಗ್ ಜಿಲ್ಲೆ, ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಕೂಡಲೇ ಜಾರಿಗೆ ಬರುವಂತೆ ಅವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಿದೆ.

ಶ್ರೀ ಸಿ.ಎಂ. ಹಿರೇಮಠ್, ತಹಶೀಲ್ದಾರ್, ಸಿಂಧನೂರು ತಾಲ್ಲೂಕು, ಇವರನ್ನು ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್ ಜಿಲ್ಲೆ ಇಲ್ಲಿನ ಖಾಲಿ ಹುದ್ದೆಗೆ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 56

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ಕ್ಕೆ ತಿದ್ದುಪಡಿ ಮಾಡುವ ಬಗ್ಗೆ ರಚಿಸಿರುವ ಪರಿಶೀಲನಾ ಸಮಿತಿಯ ವೆಚ್ಚ ಭರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 112 ಸಿಎಲ್ಎಂ 2005, ದಿನಾಂಕ: 27.05.2005.
2) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 112 ಸಿಎಲ್ಎಂ 2005, ದಿನಾಂಕ: 14.09.2005.
3) ಸಹಕಾರ ಸಂಘಗಳ/ನಿಬಂಧಕರ ಪತ್ರ ಸಂಖ್ಯೆ: ಎಲ್ಎಸ್ಎಸ್/26/ಟಿಎಫ್/2005-06, ದಿನಾಂಕ: 24.07.2006 ಮತ್ತು ದಿನಾಂಕ: 28.08.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅದಿನಿಯಮ 1959 ಅನ್ನು ಮತ್ತಷ್ಟು ತಿದ್ದುಪಡಿ ಮಾಡುವ ಸಲುವಾಗಿ ಶ್ರೀ ಬಿ.ಎಸ್. ವಿಶ್ವನಾಥನ್ ಅವರ ಅಧ್ಯಕ್ಷತೆಯಲ್ಲಿ ತ್ರಿಸದಸ್ಯ ಸಮಿತಿಯನ್ನು ರಚಿಸಿ ಸದರಿ ಸಮಿತಿಗೆ ಸಹಕಾರ ಸಂಘಗಳ ನಿಬಂಧಕರನ್ನು ಕಾರ್ಯದರ್ಶಿಯಾಗಿ ನೇಮಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಆದೇಶದಲ್ಲಿ ಸದರಿ ಸಮಿತಿಯ ಅವಧಿಯನ್ನು ದಿನಾಂಕ: 31.12.2005 ರವರೆಗೆ ವಿಸ್ತರಿಸಲಾಗಿರುತ್ತದೆ. ಆ ನಂತರ ಸದರಿ ಸಮಿತಿಯು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಸದರಿ ಸಮಿತಿಯ ಸದಸ್ಯರಿಗೆ ಪ್ರಯಾಣ ಭತ್ಯೆ, ದಿನಭತ್ಯೆ ಮತ್ತು ಆಸೀನ ಶುಲ್ಕಗಳನ್ನು ಕೊಡಲು ಹಾಗೂ ಸಮಿತಿಯ ಕಾರ್ಯನಿರ್ವಹಣೆಗೆ ಬೇಕಾದ ಸಿಬ್ಬಂದಿ ಸಹಾಯ, ಲೇಖನ ಸಾಮಾಗ್ರಿಗಳು ಇತ್ಯಾದಿ ವೆಚ್ಚಗಳನ್ನು ಭರಿಸಲು ರೂ.4,32,117/- ಗಳ ಅನುದಾನ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವವನ್ನು ಕೂಲಂಕುಶವಾಗಿ ಪರಿಗಣಿಸಿ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 179 ಸಿಎಲ್ಎಂ 2006, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ಕ್ಕೆ ತಿದ್ದುಪಡಿ ಮಾಡುವ ಬಗ್ಗೆ ನೇಮಿಸಿದ್ದ ತ್ರಿಸದಸ್ಯ ಪರಿಶೀಲನಾ ಸಮಿತಿಯ ಆಡಳಿತಾತ್ಮಕ ವೆಚ್ಚಗಳನ್ನು ಭರಿಸಲು ಅನುಕೂಲವಾಗುವಂತೆ ರೂ.4,32,117-00 (ನಾಲ್ಕು ಲಕ್ಷದ ಮೂವತ್ತೆರಡು ಸಾವಿರದ ಒಂದುನೂರ ಹದಿನೇಳು ರೂಪಾಯಿಗಳು ಮಾತ್ರ) ಗಳ ಅನುದಾನವನ್ನು ಬಿಡುಗಡೆ ಮಾಡಿದೆ.

ಈ ವೆಚ್ಚವನ್ನು 2006-07ನೇ ಸಾಲಿನಲ್ಲಿ ಒದಗಿಸಿರುವ ಆಯವ್ಯಯದ ಲೆಕ್ಕಶೀರ್ಷಿಕೆ "2425-00-001-0-01-051 (ಯೋಜನೇತರ) ಸಾಮಾನ್ಯ ವೆಚ್ಚಗಳು" ಅಡಿಯಲ್ಲಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿಯ ಮೂಲಕ ಸಂಘಗಳ ನಿಬಂಧಕರು, ಬೆಂಗಳೂರು ಇವರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ವೆಚ್ಚ-2 ಮತ್ತು 4ರ ಟಿಪ್ಪಣಿ ಸಂಖ್ಯೆ: ಆಇ-655-ವೆಚ್ಚ-2 ದಿನಾಂಕ: 11.12.2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 61

ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಶಿಕ್ಷಣ ಸಚಿವಾಲಯ
## ತಿದ್ದುಪಡಿ ಆದೇಶ

**ಸಂಖ್ಯೆ: ಇಡಿ 214 ಟಿಇಸಿ 2006, ಬೆಂಗಳೂರು, ದಿನಾಂಕ: 3ನೇ ಜನವರಿ 2007**

ಸರ್ಕಾರದ ಆದೇಶ ಸಂಖ್ಯೆ: ಇಡಿ 214 ಟಿಇಸಿ 2006, ದಿನಾಂಕ: 17.11.2006ರ ಆದೇಶದ ಪ್ರಸ್ತಾವನೆ ಭಾಗದಲ್ಲಿ (ಕ್ರಮ ಸಂಖ್ಯೆ 2) ರಲ್ಲಿ ಹಾಗೂ ಆದೇಶದ ಭಾಗದಲ್ಲಿ ಕ್ರಮ ಸಂಖ್ಯೆ 2 ರಲ್ಲಿ ನಮೂದಿಸಿರುವ "ಡಾ: ಗೋಪಾಲಕೃಷ್ಣ," ಪ್ರಾಂಶುಪಾಲರು, ಯುನಿವರ್ಸಿಟಿ ವಿಶ್ವೇಶ್ವರಯ್ಯ ಕಾಲೇಜ್ ಆಫ್ ಇಂಜಿನಿಯರಿಂಗ್, ಬೆಂಗಳೂರು ಎಂಬುದರ ಬದಲಾಗಿ "ಡಾ: ಗೋವಿಂದರಾಜು," ಪ್ರಾಂಶುಪಾಲರು, ಯುನಿವರ್ಸಿಟಿ ವಿಶ್ವೇಶ್ವರಯ್ಯ ಕಾಲೇಜ್ ಆಫ್ ಇಂಜಿನಿಯರಿಂಗ್, ಬೆಂಗಳೂರು ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 65

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

**ವಿಷಯ:** 2006-07ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ತಿರುಮಲ ಎಜುಕೇಷನಲ್ ಟ್ರಸ್ಟ್‌ನ ಶ್ರೀ ವೆಂಕಟೇಶ್ವರ ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1) ದಿನಾಂಕ: 20.02.2004ರ ಸಂಖ್ಯೆ: ಇಡಿ 268 ಯುಆರ್‌ಸಿ 2004ರ ಸರ್ಕಾರಿ ಆದೇಶ.

2) ದಿನಾಂಕ: 28.06.2006, ಸಂಖ್ಯೆ: F.SRO/NCTE/B.Ed/2005-06/6616ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

3) ದಿನಾಂಕ: 31.10.2006ರ ಕಾರ್ಯದರ್ಶಿ, ತಿರುಮಲ ಎಜುಕೇಷನಲ್ ಟ್ರಸ್ಟ್, ಶಿವಾಜಿನಗರ, ಬೆಂಗಳೂರು ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ತಿರುಮಲ ಎಜುಕೇಷನಲ್ ಟ್ರಸ್ಟ್‌ನ ಶ್ರೀ ವೆಂಕಟೇಶ್ವರ ಕಾಲೇಜ್ ಆಫ್ ಎಜುಕೇಷನ್, ಸಂಖ್ಯೆ: 1/18, 8ನೇ ಕ್ರಾಸ್, ಮಾರುತಿನಗರ್, ಮಡಿವಾಳ, ಬೆಂಗಳೂರು, ಈ ಕಾಲೇಜಿಗೆ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ: 28.06.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2006-07ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ದಿನಾಂಕ: 31.10.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 414 ಯುಬಿವಿ 2006, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ತಿರುಮಲ ಎಜುಕೇಷನಲ್ ಟ್ರಸ್ಟ್‌ನ ಶ್ರೀ ವೆಂಕಟೇಶ್ವರ

ಕಾಲೇಜ್ ಆಫ್ ಎಜುಕೇಷನ್, ಸಂ. 1/18, 8ನೇ ಕ್ರಾಸ್, ಮಾರುತಿನಗರ್, ಮಡಿವಾಳ, ಬೆಂಗಳೂರು, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2006–07ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ**

ಪಿ.ಆರ್. 66

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

**ವಿಷಯ:** ಸರ್ಕಾರಿ ಪಾಲಿಟೆಕ್ನಿಕ್ ಕುಶಾಲನಗರ ಮತ್ತು ಶ್ರೀ ಜಯಚಾಮರಾಜೇಂದ್ರ ಸರ್ಕಾರಿ ಪಾಲಿಟೆಕ್ನಿಕ್ ಬೆಂಗಳೂರು ಇಲ್ಲಿನ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** 1) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಡಿ.ಟಿ.ಇ:47: ಬಿ.ಎಲ್.ಡಿ. 2005, ದಿನಾಂಕ: 11.12.2006.

2) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಡಿ.ಟಿ.ಇ:47: ಬಿ.ಎಲ್.ಡಿ. 2005, ದಿನಾಂಕ: 11.12.2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 11.12.2006ರ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರಗಳ ಸರ್ಕಾರಿ ಪಾಲಿಟೆಕ್ನಿಕ್ ಕುಶಾಲನಗರ, ಕಾರವಾರ ಮತ್ತು ಶ್ರೀ ಜಯಚಾಮರಾಜೇಂದ್ರ ಸರ್ಕಾರಿ ಪಾಲಿಟೆಕ್ನಿಕ್ ಬೆಂಗಳೂರು ಇಲ್ಲಿನ ಕಾಲೇಜುಗಳ ಕಟ್ಟಡ ನಿರ್ಮಾಣಕ್ಕೆ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಕುಶಾಲನಗರ, ಕಾರವಾರ ಮತ್ತು ಬೆಂಗಳೂರು ಇವರು ಕ್ರಮವಾಗಿ ರೂ.25.00 ಲಕ್ಷ, (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ರೂ.25.00 ಲಕ್ಷ, (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಮತ್ತು ರೂ.80.00 ಲಕ್ಷಗಳಿಗೆ (ರೂಪಾಯಿ ಎಂಭತ್ತು ಲಕ್ಷಗಳು ಮಾತ್ರ) ಅಂದಾಜು ಪಟ್ಟಿಯನ್ನು ಕಳುಹಿಸಿ 2006–07ನೇ ಸಾಲಿಗೆ ಲೆಕ್ಕಶೀರ್ಷಿಕೆ 4202–02–104–1–01–ಯೋಜನೆಯಡಿಯಲ್ಲಿ ಸದರಿ ಕಾಲೇಜುಗಳಿಗೆ ಕಟ್ಟಡ ನಿರ್ಮಾಣಕ್ಕೆ 1/3 ಭಾಗದಷ್ಟು ಎಂದರೆ ರೂ.25.00 ಲಕ್ಷ, (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ರೂ.25.00 ಲಕ್ಷ, (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಮತ್ತು ರೂ.40.00 ಲಕ್ಷಗಳನ್ನು (ರೂಪಾಯಿ ನಲವತ್ತು ಲಕ್ಷಗಳು ಮಾತ್ರ) ಒದಗಿಸಿಕೊಳ್ಳಲಾಗಿದೆ ಎಂದು ತಿಳಿಸಿ ಮೇಲ್ಕಂಡ ಮೊತ್ತಕ್ಕೆ ಆಡಳಿತಾತ್ಮಕ ಮಂಜೂರಾತಿಗಾಗಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 573 ಯೋಯೋಕಾ 2006, ಬೆಂಗಳೂರು, ದಿನಾಂಕ: 5ನೇ ಜನವರಿ 2007**
**[ಇಡಿ:3:ಸ್ವೀಮರ (ಯುನಿಕ್) 2006, ದಿನಾಂಕ: 15.1.2007]**

ಸರ್ಕಾರಿ ಪಾಲಿಟೆಕ್ನಿಕ್ ಕುಶಾಲನಗರ, ಕಾರವಾರ ಮತ್ತು ಶ್ರೀ ಜಯಚಾಮರಾಜೇಂದ್ರ ಸರ್ಕಾರಿ ಪಾಲಿಟೆಕ್ನಿಕ್ ಬೆಂಗಳೂರು, ಕಟ್ಟಡ ನಿರ್ಮಾಣದ ರೂ.25.00 ಲಕ್ಷ (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ರೂ.25.00 ಲಕ್ಷ, (ರೂಪಾಯಿ ಇಪ್ಪತ್ತೈದುಗಳು ಮಾತ್ರ) ಮತ್ತು ರೂ.80.00 ಲಕ್ಷಗಳಿಗೆ (ರೂಪಾಯಿ ಎಂಭತ್ತು ಲಕ್ಷಗಳು ಮಾತ್ರ) ಲಕ್ಷಗಳು ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರವು ಅನುಮತಿ ನೀಡಿದೆ.

2007–07ನೇ ಸಾಲಿಗೆ ಲೆಕ್ಕಶೀರ್ಷಿಕೆ:4202–02–104–1–01–ಯೋಜನೆಯಡಿಯಲ್ಲಿ ಸದರಿ ಕಾಲೇಜುಗಳ ಕಟ್ಟಡ ನಿರ್ಮಾಣಕ್ಕೆ ಒದಗಿಸಿಕೊಂಡಿರುವ ರೂ.25.00 ಲಕ್ಷ, (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ರೂ.25.00 ಲಕ್ಷ, (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಮತ್ತು ರೂ.40.00 ಲಕ್ಷಗಳನ್ನು (ರೂಪಾಯಿ ನಲವತ್ತು ಲಕ್ಷಗಳು ಮಾತ್ರ) ಗಳನ್ನು ಬಳಸಿಕೊಂಡು ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಸಹಮತಿಯನ್ನು ಅ.ಟಿ.ಸಂಖ್ಯೆ:ಶಿಇ:1216:ಐಎಫ್(ಬಿಎ) 2006, ದಿನಾಂಕ: 29.12.2006 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 67

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ).

## INFRASTRUCTURE DEVELOPMENT SECRETARIAT

### CORRIGENDUM

**No.IDD 110 DIA 2005, Bangalore, Dated:12th December, 2006**

The contents of para (2) in the order portion of the G.O.No.IDD 110 DIA 2005 Dated; 04.11.2006 shall be substituted as under and read as follows:

2. This cost would be partly met out of the available funds of Rs.4,08,738.00 from the Head of Account 3451-00-090-1-06-125 Infrastucture Preliminary Studies-Modemisation (Plan) 2006-07 and remaining amount of Rs.81,262.00 from the Head of Account "3465-00-190-1-06-059-Infrastucture Preliminary Studies-Other Expenditure (Plan) 2006-07.

By Order and in the Name of the Governor of Karnataka,

**N. MANJULA GEETHA**

PR-1760

Under Secretary to Government,
Infrastucture Development Department.

### CORRIGENDUM

**No.IDD 52 NSW 2004, Bangalore, Dated:6th December, 2006**

In para 3 of the order portion of the Government Order No.IDD 52 NSW 2004 Dated:03.11.2006 for the following words in the 3rd line "Chief Engineer, Communication & Buildings (South), Public Works Department, Bangalore", the following words "Executive Engineer, Bangalore Division, Bangalore" shall be substituted and read as "Executive Engineer, Bangalore Division, Bangalore".

By Order and in the Name of the Governor of Karnataka,

**N. MANJULA GEETHA**

PR-1761

Under Secretary to Government,
Infrastucture Development Department.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಹಾಸನ ತಾಲ್ಲೂಕಿನ ಎನ್.ಹೆಚ್.48, ಬೈಪಾಸ್ ರಸ್ತೆಯಿಂದ ಚನ್ನಪಟ್ಟಣ ಕೆರೆ ಮುಖಾಂತರ ಬಿ.ಟಿ. ರಸ್ತೆಗೆ ಸೇರುವ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** (1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ದಿನಾಂಕ:08.12.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರುರವರು ಹಾಸನ ತಾಲ್ಲೂಕಿನ ಎನ್.ಹೆಚ್. -48, ಬೈಪಾಸ್ ರಸ್ತೆಯಿಂದ ಚನ್ನಪಟ್ಟಣ ಕೆರೆ ಮುಖಾಂತರ ಬಿ.ಟಿ. ರಸ್ತೆಗೆ ಸೇರುವ 1.60 ಕಿಮೀ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 357 ಸಿಆರ್‌ಎಂ 2006, ಬೆಂಗಳೂರು, ದಿನಾಂಕ:8ನೇ ಡಿಸೆಂಬರ್, 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಹಾಸನ ತಾಲ್ಲೂಕಿನ ಎನ್.ಹೆಚ್. -48, ಬೈಪಾಸ್ ರಸ್ತೆಯಿಂದ ಚನ್ನಪಟ್ಟಣ ಕೆರೆ ಮುಖಾಂತರ ಬಿ.ಟಿ. ರಸ್ತೆಗೆ ಸೇರುವ 1.60 ಕಿಮೀ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 1762

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ವಿಜಾಪುರ ಜಿಲ್ಲೆ ವಿಜಾಪುರ ನಗರಾಭಿವೃದ್ಧಿ ಪ್ರಾಧಿಕಾರದ ಮಹಾ ಯೋಜನೆಗೆ (ಪ 1) ಅಂತಿಮ ಅನುಮೋದನೆಯನ್ನು ನೀಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ನಅಇ: 116: ಬೆಮಪ್ರಾ: 2004, ಬೆಂಗಳೂರು ದಿನಾಂಕ:30.06.2005.

(2) ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ವಿಜಾಪುರ ಇವರ ಪತ್ರ ಸಂಖ್ಯೆ: ನಪ್ರಾವಿ: ಮಯೋ: 2000-01: 287: ದಿನಾಂಕ:21.06.2006/ 21.07.2006.

(3) ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ ದಿನಾಂಕ:28.10.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ವಿಜಾಪುರ ಜಿಲ್ಲೆ ವಿಜಾಪುರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ-1) ಗೆ ತಾತ್ಕಾಲಿಕ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ವಿಜಾಪುರ ನಗರಾಭಿವೃದ್ಧಿ ಪ್ರಾಧಿಕಾರವು ವಿಜಾಪುರ ಜಿಲ್ಲೆ ವಿಜಾಪುರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 13(1) ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾಯೋಜನೆ (ಪರಿಷ್ಕೃತ-1) ಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ, ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರಲ್ಲಿ ನಗರ ಯೋಜನಾ ನಿರ್ದೇಶಕರು, ವಿಜಾಪುರ ಪಟ್ಟಣದ ಜನಸಂಖ್ಯೆಯು 2021ರಲ್ಲಿ 05 ಲಕ್ಷಕ್ಕೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಮಹಾ ಯೋಜನೆಯನ್ನು ತಯಾರಿಸಲಾಗಿದೆ. ವಿಜಾಪುರ ಸ್ಥಳೀಯ ಯೋಜನಾ ಪ್ರದೇಶದ 42090 ಹೆಕ್ಟೇರ್ ಪ್ರದೇಶದಲ್ಲಿ 6827.65 ಹೆ. ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ ಒಟ್ಟು 6827.65 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 2983.96 ಹೆಕ್ಟೇರ್, ವಾಣಿಜ್ಯಕ್ಕೆ 371.99 ಹೆ. ಕೈಗಾರಿಕೆಗಾಗಿ 514.60 ಹೆ. ನಾಗರೀಕ ಸೌಲಭ್ಯಕ್ಕಾಗಿ 177.16 ಹೆ. ಸಾರ್ವಜನಿಕ: ಅರೆ ಸಾರ್ವಜನಿಕ ಉಪಯೋಗಕ್ಕೆ 1005.38 ಹೆ., ಉದ್ಯಾನವನ: ಬಯಲು ಜಾಗಗಳಿಗೆ 741.55 ಹೆ., ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆ (ಪ-1) ಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 13(1) ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ವಿಷಯವನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 325 ಬೆಮಪ್ರಾ 2006, ಬೆಂಗಳೂರು, ದಿನಾಂಕ:7ನೇ ಡಿಸೆಂಬರ್, 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಜಾಪುರ ಜಿಲ್ಲೆ ವಿಜಾಪುರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ-1)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3) ರನ್ವಯ ಅಂತಿಮ ಅನುಮೋದನೆಯನ್ನು ನೀಡಲಾಗಿದೆ. ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ವೈ. ಸಾಗರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1763

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್.ಎಂ.ಬೇವೂರ್, ಕೆಎಎಸ್ ಅಧಿಕಾರಿ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ಶ್ರೀ ಗುಂಡಪ್ಪ, ಮುಖ್ಯ ಲೆಕ್ಕಾಧಿಕಾರಿ (ನಿಧನ) ಮತ್ತು ಶ್ರೀ ರಘುನಾಥ್‌ರಾವ್, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಅವರುಗಳಿಗೆ ಸಂಬಂಧಿಸಿದಂತೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 112 ಎಸ್‌ಇಎನ್ 2000 ದಿನಾಂಕ:04.04.01.
2) ವಿಚಾರಣಾ ವರದಿ ಸಂಖ್ಯೆ:ಲೋಕ್/ಎಆರ್‌ಇ–1/ಇಎನ್‌ಕ್ಯೂ–109/02–03 ದಿನಾಂಕ:31.01.04.
3) ಸನ್ಮಾನ್ಯ ಉಪ ಲೋಕಾಯುಕ್ತರ ಪತ್ರ ಕ್ರಮಾಂಕ:ಲೋಕ್/ಎಆರ್‌ಇ–1/ಇಎನ್‌ಕ್ಯೂ–109/02–03 ದಿನಾಂಕ:26.07.05.
4) ನೋಟೀಸ್ ಕ್ರಮಾಂಕ:ಸಿಆಸುಇ 112 ಎಸ್‌ಇಎನ್ 2000 ದಿನಾಂಕ:16/17.08.05.
5) ಶ್ರೀ ರಘುನಾಥ್‌ರಾವ್, ನಿವೃತ್ತ ಪ್ರಥಮ ದರ್ಜೆ ಸಹಾಯಕ ಅವರ ಲಿಖಿತ ಉತ್ತರ ದಿನಾಂಕ:31.08.05.
6) ಸರ್ಕಾರದ ಪತ್ರ ಸಂಖ್ಯೆ:ಸಿಆಸುಇ 112 ಎಸ್‌ಇಎನ್ 2000 ದಿನಾಂಕ:20.06.06.
7) ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಅವರ ಪತ್ರ ಸಂಖ್ಯೆ:ಪಿಎಸ್‌ಸಿ/64/ಸಿಎನ್‌ಎಸ್/06 ದಿ:28.10.06.

**ಪ್ರಸ್ತಾವನೆ:**

1991–92, 1993–94 ಮತ್ತು 1994–95ನೇ ಸಾಲಿನಲ್ಲಿ ಬೀದರ್ ಜಿಲ್ಲಾ ಪಂಚಾಯತ್ ವ್ಯಾಪ್ತಿಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಛೇರಿಯಲ್ಲಿ ನಡೆದಿದೆ ಎನ್ನಲಾಗಿದ್ದ ಹಣಕಾಸಿನ ಅವ್ಯವಹಾರಗಳ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರನ್ವಯ ಶ್ರೀ ಎಸ್.ಎಂ.ಬೇವೂರ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಸಹಾಯಕ ಕಾರ್ಯದರ್ಶಿ, ಶ್ರೀ ಗುಂಡಪ್ಪ, ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಬೀದರ್, ಶ್ರೀಮತಿ ಪಿ.ವಸುಂದರಾ ದೇವಿ, ಸಹಾಯಕ ಜಿಲ್ಲಾ ಆರೋಗ್ಯಾಧಿಕಾರಿ, ಶ್ರೀ ಖಲೀಲ್ ಅಹಮದ್, ಅಧೀಕ್ಷಕ, ಶ್ರೀ ದುಂಡಪ್ಪ, ಸರ್ವೀಸ್ ಇಂಜಿನಿಯರ್, ಶ್ರೀ ಮಾಣಿಕ್‌ರಾವ್ ಖಾಟೆ, ಶ್ರೀ ಬಸವರಾಜ ಬರಶೆಟ್ಟಿ, ಶ್ರೀ ರಘುನಾಥರಾವ್, ಶ್ರೀ ಜನಾರ್ಧನ್, ಪ್ರಥಮ ದರ್ಜೆ ಸಹಾಯಕ ಮತ್ತು ಸ್ಟೋರ್ ಕೀಪರ್, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಛೇರಿ, ಬೀದರ್ ಅವರುಗಳ ವಿರುದ್ಧ ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆ ನಡೆಸಲು ಅವರಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಹಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಹೆಚ್ಚುವರಿ ನಿಬಂಧಕರು, ವಿಚಾರಣೆಗಳು–1, ಕರ್ನಾಟಕ ಲೋಕಾಯುಕ್ತ ಕಛೇರಿ ಅವರು ವಿಚಾರಣೆ ನಡೆಸಿ ಮೇಲೆ (2)ರಲ್ಲಿ ಓದಲಾದ ವಿಚಾರಣಾ ವರದಿಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ಸಲ್ಲಿಸಿ ಆರೋಪ ಕುರಿತು ಈ ಕೆಳಕಂಡ ನಿರ್ಣಯ ನೀಡಿರುತ್ತಾರೆ.

ಬೀದರ್ ಜಿಲ್ಲಾ ಪಂಚಾಯತ್ ವ್ಯಾಪ್ತಿಯ ಜಿಲ್ಲಾ ಅರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಕಛೇರಿಯಲ್ಲಿ 1991–92, 93–94 ಮತ್ತು 94–95ನೇ ಸಾಲಿನಲ್ಲಿ ನಡೆದಿರುವ ಹಣಕಾಸಿನ ಅವ್ಯವಹಾರದ ಸಂಬಂಧ ಒಟ್ಟು 16 ಆರೋಪಗಳನ್ನು ಮಾಡಿರುತ್ತಾರೆ.

ಬೀದರ್ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಶ್ರೀ ಗುಂಡಪ್ಪ, ಮುಖ್ಯ ಲೆಕ್ಕಾಧಿಕಾರಿ (ನಿಧನ) ಅವರು ಮುಖ್ಯ ಲೆಕ್ಕಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶಾಂತಿ ಮೋಟಾರ್ಸ್ ಸಂಸ್ಥೆಯ ರೂ.54,350/- ಬಿಲ್ಲಿಗೆ ಬದಲಾಗಿ ರೂ.63,950/- ಗಳನ್ನು ಪಾವತಿಸಿ ರೂ.9,600/- ನಷ್ಟ ಉಂಟು ಮಾಡಿರುವ 3ನೇ ಆರೋಪ ಮತ್ತು ವೇತನ ಶೀರ್ಷಿಕೆ ಅಡಿಯಿಂದ ಔಷಧಿ ಪರಿಕರಣಗಳನ್ನು ಖರೀದಿಸಲು ರೂ.35.21 ಲಕ್ಷ ಉಪಯೋಗಿಸಿ ಕೆ.ಎಫ್.ಸಿ ನಿಯಮಾವಳಿಗಳನ್ನು ಉಲ್ಲಂಘಿಸಿರುವ 8ನೇ ಆರೋಪ ಸಾಬೀತಾಗಿವೆ. ರೂ.18.2 ಲಕ್ಷ ಬಿಲ್ಲನ್ನು ಮೇಲ್‌ರುಜು ಮಾಡಿ ಸಲ್ಲಿಸಲು ಅನಾವಶ್ಯ ವಿಳಂಬ ಮಾಡಿರುವ 9ನೇ ಆರೋಪ ಮತ್ತು PHC ಗಳಿಗೆ ಸಾಮಗ್ರಿಗಳನ್ನು ಸರಬರಾಜು ಮಾಡದೇ ಇದ್ದರೂ ಮೂಲ ಡೆಲಿವರಿಗಳಲ್ಲಿ ಅದನ್ನು ಸರಬರಾಜು ಮಾಡಿದಂತೆ ಸೇರಿಸಿ ಸರ್ಕಾರಕ್ಕೆ ರೂ.2.91 ಲಕ್ಷ ನಷ್ಟ ಉಂಟು ಮಾಡಿರುವ 11ನೇ ಆರೋಪವು ಸಾಬೀತಾಗಿಲ್ಲವೆಂಬ ನಿರ್ಣಯ ನೀಡಿರುತ್ತಾರೆ. ಶ್ರೀ ರಘುನಾಥ ರಾವ್ ಅವರು ಪ್ರಥಮ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸ್ಟಾಕ್ ರಿಜಿಸ್ಟರ್‌ನ್ನು ಸರಿಯಾಗಿ ನಿರ್ವಹಿಸದೆ ರೂ.23,540/- ನಷ್ಟಕ್ಕೆ ಕಾರಣರಾಗಿರುವ 7ನೇ ಆರೋಪ ಸಾಬೀತಾಗಿದೆ ಎಂಬ ನಿರ್ಣಯ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಉಪ ಲೋಕಾಯುಕ್ತರವರು ಮೇಲೆ (3)ರಲ್ಲಿ ಓದಲಾದ ದಿ:26.07.05ರ ಪತ್ರದಲ್ಲಿ ವಿಚಾರಣಾ ವರದಿಯೊಂದಿಗೆ ದಾಖಲೆಗಳನ್ನು ರವಾನಿಸಿರುತ್ತಾರೆ. ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನ ಪ್ರತಿಗಳನ್ನು ಮೇಲೆ (4)ರಲ್ಲಿ ಓದಲಾದ ದಿ:16/17.08.05ರ ನೋಟೀಸಿನೊಡನೆ ಶ್ರೀ ರಘುನಾಥ್‌ರಾವ್, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಅವರಿಗೆ ಒದಗಿಸಿ ಅವುಗಳ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಈ ನೋಟೀಸಿಗೆ ಶ್ರೀ ರಘುನಾಥ್‌ರಾವ್, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಅವರು ಮೇಲೆ (5)ರಲ್ಲಿ ಓದಲಾದ ದಿ:31.08.05ರ ಉತ್ತರ ಸಲ್ಲಿಸಿ ದಿ:31.03.03ರಂದು ಸೇವೆಯಿಂದ ವಯೋ ನಿವೃತ್ತಿ ಹೊಂದಿದ್ದು, ಮಹಾಲೇಖಾಪಾಲರವರು ಡಿ.ಸಿ.ಆರ್.ಜಿ. ಮತ್ತು ಕಮ್ಯೂಟೇಷನ್ ಪೆನ್ಷನ್ ಇತ್ಯಾದಿ ಮೊತ್ತಗಳನ್ನು ಇಲಾಖಾ ವಿಚಾರಣೆ ಮುಗಿಯುವವರೆಗೆ ಬಿಡುಗಡೆ ಮಾಡುವುದಿಲ್ಲವೆಂದು ತಿಳಿಸಿರುತ್ತಾರೆ. ತಾವು ಹಲವಾರು ವೈಯಕ್ತಿಕ ಸಮಸ್ಯೆಗಳಿಂದ ಬಳಲುತ್ತಿದ್ದು, ತುಂಬಾ ಆರ್ಥಿಕ ಮುಗ್ಗಟ್ಟಿನಿಂದ ಇರುವುದಾಗಿ ತಿಳಿಸಿ ಸನ್ಮಾನ್ಯ ಉಪ ಲೋಕಾಯುಕ್ತರವರು ಶಿಫಾರಸ್ಸು ಮಾಡಿರುವಂತೆ ತಮ್ಮ ನಿವೃತ್ತಿ ಸೌಲಭ್ಯಗಳಿಂದ ರೂ.11,140/-ಗಳನ್ನು ತಡೆಹಿಡಿದುಕೊಂಡು ಉಳಿದ ಡಿ.ಸಿ.ಆರ್.ಜಿ., ಕಮ್ಯೂಟೇಷನ್ ಪೆನ್ಷನ್ ಮುಂತಾದ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಶ್ರೀ ಖಲೀಲ್ ಅಹಮದ್, ಅಧೀಕ್ಷಕರು ಇವರು ಸೇವೆಯಿಂದ ನಿವೃತ್ತರಾಗಿರುವುದರಿಂದ ಇವರ ಮೇಲಿನ ಆರೋಪಗಳು Barred by time limitation ಆಗಿರುವುದು ಎಂದು ತಿಳಿಸಿರುವುದರಿಂದ ಇವರಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುತ್ತಿದೆ. ಶ್ರೀ ಬಸವರಾಜ ಬರಶೆಟ್ಟಿ ಮತ್ತು ಶ್ರೀ ಜನಾರ್ಧನ್, ಪ್ರಥಮ ದರ್ಜೆ ಸಹಾಯಕರುಗಳು ಅವರುಗಳಿಗೆ ಸಂಬಂಧಿಸಿದಂತೆ ಪ್ರಕರಣವನ್ನು ಸಚಿವ ಸಂಪುಟದ ಮುಂದೆ ಮಂಡಿಸಿ ಆದೇಶ ಪಡೆಯಲು ಪ್ರತ್ಯೇಕ ಕ್ರಮಕೈಗೊಳ್ಳಲಾಗುತ್ತಿದೆ.

ಆರೋಪಿತರಾದ ಶ್ರೀ ರಘುನಾಥ್‌ರಾವ್ ಅವರು ಸನ್ಮಾನ್ಯ ಉಪ ಲೋಕಾಯುಕ್ತರವರು ಶಿಫಾರಸ್ಸು ಮಾಡಿರುವಂತೆ ತಮಗೆ ಬರಬೇಕಾದ ಡಿ.ಸಿ.ಆರ್.ಜಿ. ಹಾಗೂ ಕಮ್ಯುಟೇಷನ್ ಪೆನ್ಷನ್ ನಲ್ಲಿ ರೂ.11,140/- ಹಣವನ್ನು ಕಟಾಯಿಸಿ ಉಳಿದ ಡಿ.ಸಿ.ಆರ್.ಜಿ. ಮತ್ತು ಕಮ್ಯುಟೇಷನ್ ಪೆನ್ಷನ್‌ನ್ನು ಬಿಡುಗಡೆ ಮಾಡುವಂತೆ ಕೋರಿರುವುದರಿಂದ ವಿಚಾರಣಾ ವರದಿ ಮತ್ತು ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡಂತಾಗಿರುತ್ತದೆ. ಶ್ರೀ ಗುಂಡಪ್ಪ ಅವರು ಸೇವೆಯಲ್ಲಿರುವಾಗಲೇ ನಿಧನ ಹೊಂದಿರುವುದರಿಂದ ಅವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರನ್ವಯ ವಾಗ್ದಂಡನೆಯನ್ನು ವಿಧಿಸಲು ಬರುವುದಿಲ್ಲ. ಶ್ರೀ ರಘುನಾಥ್‌ರಾವ್ ಅವರು ಸೇವೆಯಿಂದ ದಿ:31.07.03ರಂದು ವಯೋ ನಿವೃತ್ತಿ ಹೊಂದಿರುವುದರಿಂದ ಅವರಿಗೂ ಸಹ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii) ರನ್ವಯ ವಾಗ್ದಂಡನೆಯನ್ನು ವಿಧಿಸಲು ಬರುವುದಿಲ್ಲ. ಆದುದರಿಂದ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನ ಅನ್ವಯ ಶ್ರೀ ಗುಂಡಪ್ಪ, ಮುಖ್ಯ ಲೆಕ್ಕಾಧಿಕಾರಿ (ನಿಧನ) ಅವರ ನಿವೃತ್ತಿ ಸೌಲಭ್ಯಗಳಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟ ರೂ.9,600/-ಗಳನ್ನು ಹಾಗೂ ಶ್ರೀ ರಘುನಾಥ್‌ರಾವ್, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಅವರಿಂದ ಉಂಟಾದ ಆರ್ಥಿಕ ನಷ್ಟ ರೂ.11,140/-ಗಳನ್ನು ಕಡಿತಗೊಳಿಸುವ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಮೇಲೆ (6) ಮತ್ತು (7)ರಲ್ಲಿ ಓದಲಾದ ಪತ್ರಗಳಲ್ಲಿ ಪಡೆಯಲಾಗಿದೆ. ಕರ್ನಾಟಕ ಲೋಕ ಸೇವಾ ಆಯೋಗವು ನೀಡಿರುವ ಸಹಮತಿಯನ್ವಯ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 112 ಎಸ್‌ಇಎನ್ 2000(ಭಾ) ಬೆಂಗಳೂರು ದಿನಾಂಕ:11ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ನಿವೃತ್ತ/ನಿಧನರಾದ ಆರೋಪಿತರುಗಳಿಗೆ ಸಂಬಂಧಿಸಿದಂತೆ ಈ ಮುಂದಿನಂತೆ ಆದೇಶಿಸುತ್ತದೆ.

i) ಶ್ರೀ ಗುಂಡಪ್ಪ, ಮುಖ್ಯ ಲೆಕ್ಕಾಧಿಕಾರಿ (ನಿಧನ) ಅವರ ನಿವೃತ್ತಿ ಸೌಲಭ್ಯಗಳಿಂದ ರೂ.9,600/-ಗಳನ್ನು ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ii) ಶ್ರೀ ರಘುನಾಥರಾವ್, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಅವರ ನಿವೃತ್ತಿ ಸೌಲಭ್ಯಗಳಿಂದ ರೂ.11,140/-ಗಳನ್ನು ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್‌ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

ಪಿ.ಆರ್. 1759

## ENERGY SECRETARIAT

**Sub:** Enhancement of allotted capacity of Wind Power Project from 2.00 MW to 24.8 MW by M/s Fiza Developers & Inter Trade Pvt. Ltd.

**Read:** 1. Government Order No. DE 400 NCE 2004 Dated: 05.01.2005.
2.Government Order No. EN 238 NCE 2006 Dated:15.06.2006.
3. Letter No. KRED/ 08/ FIZA/ 2006/ 2427, Dated:02.12.2006 received from the Managing Director, Karnataka Renewable Energy Development Limited, Bangalore.

**Preamble:**

In the Government order read at (1) above the sanction has been accorded to implement 10.00 MW capacity Wind Power Project at Lambangihatti, Golarahatti and Myasarahalli villages of Chitradurga Districts to M/s Fiza Developers & Inter Trade Pvt. Ltd.

In the Government Order read at (2) above permission was accorded for the change of location of 8.00 MW capacity of Wind Power Project in favour of M/s Fiza Developers & Inter Trade Pvt. Ltd from out of the sanctioned 10.00 MW capacity from Chitradurga District to Dakshina Kannada District.

The Developer has submitted the proposal to the Managing Director, Karnataka Renewable Energy Development Limited, Bangalore for enhancement of balance capacity from 2 MW to 24.8 MW the same has been recommended by the Managing Director, Karnataka Renewable Energy Development Limited vide his letter read at (3) above.

The proposal has been examined at the Government level and hence the order:

**Government Order No.EN 460 NCE 2006, Bangalore, Dated:7th December, 2006**

Government accords approval for the enhancement of the capacity from 2.00 MW to 24.8 MW at Lambangihatti, Golarahatti and Myasarahalli villages of Chitradurga Districts to M/s Fiza Developers & Inter Trade Pvt. Ltd. as detailed below:

"A non-continuous Northwest-Southwest oriented ridge is situated at about 1 Km distrance on the East of Golarahatti, Lambangihatti and Myasarahalli villages. The ridge is having several peaks and are 813, 774, 823, 824, 812, 871 and 769 the general topography of the area is discribed has open scrub and is also having the reference of manganese mining. The entire area is bounded by geographical Co-ordinates, Latitude: $14^0$ 22' 30"-$14^0$ 26'40" N, Longitude: $76^0$6'56"-$76^0$10'E, Ridge Peaks: 813, 774, 823, 824, 812, 871 and 769m AMSL".

The terms and conditions of the Government Order read at (1) above shall **IPSO FACTO** applicable.

By Order and in the Name of the Governor of Karnataka,
**SURESH B. KRISHNAPPANAVAR**
Under Secretary to Government,
Energy Department.

PR-1729

## FOREST, ECOLOGY AND ENVIRONMENT SECRETARIAT

**Sub:** Diversion of 5.94 ha. of additional/fresh forest land for renewal of Iron Ore ML No.432/631 in favour of Balaji Mines and Minerals Pvt. Ltd. in Bellary District.

**Read:**1) Letter No.A5(B1)MNG.CR.270/93-94, dated 02/11/1999 of the Principal Chief Conservator of Forests, Bangalore.
2) State Government letter No.FEE 57 FFM 99, dated 06/03/2000.
3) Government of India Ministry of Environment and Forests, New Delhi letter No.8-30/ 2000-FC, dated: 20.12.2000.
4) Government Order No.FEE 57 FFM 99, dated: 25.01.2001.
5) Government of India Ministry of Environment and Forests, New Delhi letter No.8-30/ 2000-FC, dated: 2nd July 2004.
6) Letter No. A5(1)MNG.CR.270/93-94, dated: 20.02.2006 of Principal Chief Conservator of Forests,Bangalore.
7) State Government letter No.FEE 84 FFM 2002, dated:24.02.2006.
8) Government of India, Ministry of Environment and Forests, New Delhi letter No. 8-30/ 2000-FC, dated: 9th May 2006.

**Preamble:**

The Principal Chief Conservator of Forests had sent proposal vide his letter dated: 02/11.1999 read at (1) above for renewal of Mining lease No. 432/631in favour of M/s Balaji Mines and Minerals Pvt.Ltd., Jaisingpur Village, N.E.B.Block, Sandur Taluk, Bellary District over an area of 22.66 ha. of forest land for a period of 20 years from 25.9.93 subject to certain conditions.

The proposal of the Principal Chief Conservator of Forest was recommended to Government of India, Ministry of Environment and Forests, New Delhi vide Government letter dated 06.03.2000 read at (2) above seeking prior approval of Government of India under section 2 of Forest (Conservation) Act, 1980.

After careful consideration of the proposal of the State Government, Government of India vide its letter dated 20/12/2000 read at (3) above gave its approval for diversion of 16.72 ha. of forest land in favour of M/s Balaji Mines and Minerals Pvt.Ltd. for renewal of 432/631, Jaisingpur Village, N.E.B.Block, Sandur Taluk, Bellary District subject to the fulfillment of certain conditions.

Accordingly Government Order read at (4) above was issued for diversion of 16.72 ha. (already broken up area/used up area) of forest land in favour of M/s Balaji Mines and Minerals Pvt.Ltd. for renewal of M.L.No. 432/631, Jaisingpur Village, N.E.B.Block, Sandur Taluk, Bellary District

Later the Central Government agreed in-principle for diversion of the remaining 5.94 ha. fresh area in respect of already approved renewal of mining lease No.432/631 of forest land (16.72 ha. already broken up area was approved earlier) in favour of M/s Balaji Mines and minerals(Pvt)Ltd., at Jaisingapura Village, N.E.Block, Sandur Taluk, Bellalry District, Karnataka for a period of 20 years coterminus with the mining lease granted under MMRD Act, 1957, subject to fulfillment of certain conditions vide letter read at (5) above.

In compliance of the conditions stipulated by Government of India vide its letter dated 02.07.2004 the Principal Chief Conservator of Forests vide his letter dated 20.02.2006 read at (6) above has sent his compliance report. This compliance report was forwarded to Government of India vide State Government letter dated 24.02.2006 read at (7) above.

Finally Government of India vide its letter dated:9th May 2006 read at (8) above has conveyed its approval under Section 2 of Forest (Conservation) Act, 1980 for diversion of 5.94 ha. of forest land in favour of Balaji Mines and Minerals Pvt. Ltd.,Jaisinghpur, N.E.Block, Sandur Taluk, Bellary District subject to the fulfillment of certain conditions. Hence the order.

**Government Order No. NO:FEE 84 FFM 2002, Bangalore, Dated:25th November, 2006**

After examining all aspects of the matter and in view of the approval accorded to the proposal by Government of India, Ministry of Environment and Forests, New Delhi, Government are pleased to accord its approval under Section 2 of Forest (Conservation) Act, 1980 for diversion of 5.94 ha. of forest land(16.72 ha. already broken up/used up area ) for renewal of M.L.No.432/631, for extraction of iron ore in favour of M/s Balaji Mines and Minerals(Pvt.)Ltd. Jaisinghpur, N.E.Block, Sandur Taluk, Bellary District subject to the following conditions also.

1. Legal status of forest land shall remain unchanged.
2) Compensatory Afforestation as well as Penal Compensatory Afforestation shall be raised and maintained by the State Forest Department at the project cost.
3) The non-forest land identified for raising Compensatory afforestation shall be notified as Reserved Forest/Protected Forest under Section-4/ Section-29 of the Indian Forest Act, 1927 or under the corresponding Section(s) of the local Forest Act, as the case may be, by the State Government within six months. Nodal Officer shall report compliance in this regard.
4) The period of diversion of the entire 22.66 ha. of forest land shall be 20 years w.e.f 20.12.2000, subject to possession of valid approval for the mining lease under MMRD Act 1957.
5) The user agency shall protect the top-soil at the project cost.
6) Reclamation Plan shall be strictly implemented which shall be monitored regularly by the State Forest Department.

6. ನೀವು ದಿನಾಂಕ:4.6.2003ರಂದು ಅಕ್ರಮವಾಗಿ ಸಾಗಿಸಿ ಯರಗನಹಳ್ಳಿ ವ್ಯಾಪ್ತಿಯ ಬಾಳೆತೋಟದಲ್ಲಿ ಅಡಗಿಸಿಟ್ಟಿದ್ದ 11 ಸಾಗುವಾನಿ ನಾಟಾಗಳನ್ನು ಅರಣ್ಯ ಇಲಾಖೆಯ ಅಧಿಕಾರಿ –ಗಳು ವಶಪಡಿಸಿಕೊಂಡಿರುತ್ತಾರೆ. ಈ ಬಗ್ಗೆ ನಿಮ್ಮ ಮತ್ತು ನಿಮ್ಮ ಸಂಗಡಿಗರ ವಿರುದ್ಧ ದೊಡ್ಡಬೈರನಕುಪ್ಪೆ ವನ್ಯಜೀವಿ ವಲಯ ಅಧಿಕಾರಿಗಳು, ಅರಣ್ಯ ಮೊಕದ್ದಮೆ ಸಂಖ್ಯೆ:5/2003–04 ಕಲಂ 24, 50(2)(ಕೆ), 62, 80 ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 144, 163, ರೆಡ್‌ವಿತ್ 165 ಕರ್ನಾಟಕ ಅರಣ್ಯ ನಿಯಮ ಕಾಯ್ದೆ 1972ರ ಪ್ರಕಾರ ಮೊಕದ್ದಮೆ ದಾಖಲಿಸಿರುತ್ತಾರೆ. ತನ್ಮೂಲಕ ನೀವು ಸಾಗುವಾನಿ ಮರಗಳನ್ನು ಕದ್ದು ಸಾಗಿಸಿ, ಅಕ್ರಮವಾಗಿ ಮಾರಾಟ ಮಾಡಲು ಪ್ರಯತ್ನಿಸಿ ಕಾನೂನು ಬಾಹಿರ ಕೃತ್ಯದಲ್ಲಿ ತೊಡಗಿ ತೀವ್ರ ದುರ್ನಡತೆ ಪ್ರದರ್ಶಿಸಿರುತ್ತೀರಿ.

7. ಶ್ರೀ.ಪುಟ್ಟಲಿಂಗೇಗೌಡ ಉರುಫ್ ಶೇಖರ ಬಿನ್ ನಿಂಗೇಗೌಡ, ಪಿ.ಸಿ.399, 5ನೇ ಪಡೆ, ಕೆ.ಎಸ್.ಆರ್.ಪಿ. ಮೈಸೂರು (ಈಗ 6ನೇ ಪಡೆ, ಕೆ.ಎಸ್.ಆರ್.ಪಿ. ಗುಲ್ಬರ್ಗಾ) ಆದ ಇವರು ದಿನಾಂಕ:22.5.2003ರಂದು ಉದ್ಬೂರು ಅರಣ್ಯ ಪ್ರದೇಶದಲ್ಲಿ ಎನ.ಸಿ.ಮಾದಯ್ಯ ಉರುಫ್ ಮರದ ಮಹದೇವ ಹೊನ್ನಮ್ಮನಕಟ್ಟೆ, ಶೇಖರ್ ಬಿನ್ ನಾರಾಯಣ ಹೊಸಹೊಳಲು, ನಾಗ ಬಿನ್ ಸಖ್ಯ ಹೊಸಹೊಳಲು, ರವಿ ಬಿನ್ ಪುಟ್ಟೇಗೌಡ ಮತ್ತು ರಾಜ ಎನ್ನುವವರೊಂದಿಗೆ ಸೇರಿ ಸಾಗುವಾನಿ ಮರಗಳನ್ನು ಕಡಿದು ಮೈಸೂರಿಗೆ ಸಾಗಿಸಿರುತ್ತೀರಿ. ತನ್ಮೂಲಕ ಸಾಗುವನಿ ಮರಗಳನ್ನು ಕಡಿಯುವುದು, ಅಕ್ರಮವಾಗಿ ಸಾಗಾಣೆ ಮತ್ತು ಮಾರಾಟ ಮಾಡುವ ಕೃತ್ಯದಲ್ಲಿ ತೊಡಗಿದ್ದು, ಒಬ್ಬ ಪೊಲೀಸ್ ಅಧಿಕಾರಿಗೆ ಉಚಿತವಲ್ಲದ ರೀತಿಯಲ್ಲಿ ವರ್ತಿಸಿ ತೀವ್ರ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿದ್ದೀರಿ.

8. ನೀವು ದಿನಾಂಕ:22.5.2003ರಂದು ಉದ್ಬೂರು ಅರಣ್ಯ ವಲಯದಲ್ಲಿ ಅಕ್ರಮವಾಗಿ ಸಾಗುವಾನಿ ಮರಗಳನ್ನು ಕಡಿದು ಸಹಚರರೊಂದಿಗೆ ಸಾಗಿಸಿರುವ ಬಗ್ಗೆ ಅಂತರಸಂತೆ ವನ್ಯಜೀವಿ ವಲಯದ ಅಧಿಕಾರಿಗಳು ಇವರ ಹಾಗೂ ಇವರ ಸಹಚರರ ವಿರುದ್ಧ ಅರಣ್ಯಯ್ ಮೊಕದ್ದಮೆ ಸಂಖ್ಯೆ:17/2003–04, ಕಲಂ 144, 145 ಅರಣ್ಯ ನಿಯಮ 1965, ಕಲಂ 24 ಅರಣ್ಯ ಇಲಾಖೆ ಕಾಯ್ದೆ 1963 ಮತ್ತು ಕಲಂ 27, 31, 35(6)(8) ರೆವಿ 51 ವನ್ಯಜೀವಿ ಸಂರಕ್ಷಣಾ ಕಾಯ್ದೆ ಅಡಿಯಲ್ಲಿ ದಿನಾಂಕ:22.5.2003ರಂದು ಮೊಕದ್ದಮೆ ದಾಖಲಿಸಿರುತ್ತಾರೆ. ನೀವು, ಉದ್ಬೂರು ಅರಣ್ಯ ಪ್ರದೇಶದಲ್ಲಿ ಅಕ್ರಮವಾಗಿ ಸಾಗುವಾನಿ ಮರಗಳನ್ನು ಕಡಿದು ಸಾಗಿಸಿ ಮಾರಾಟ ಮಾಡುವ ಕೃತ್ಯದಲ್ಲಿ ತೊಡಗಿ ಅರಣ್ಯ ಕಾಯ್ದೆಗಳ ಅಡಿ ಮೊಕದ್ದಮೆಯಲ್ಲಿ ಭಾಗಿಯಾಗಿ ತೀವ್ರ ದುರ್ನಡತೆ ಪ್ರದರ್ಶಿಸಿರುತ್ತೀರಿ.

9. ಶ್ರೀ ಪುಟ್ಟಲಿಂಗೇಗೌಡ ಉರುಫ್ ಶೇಖರ್ ಬಿನ್ ನಿಂಗೇಗೌಡ, ಪಿಸಿ–399, 5ನೇ ಪಡೆ, ಕೆಎಸ್‌ಆರ್‌ಪಿ, ಮೈಸೂರು ಆದ ನೀವು ದಿನಾಂಕ:4.6.2003ರಂದು ಶ್ರೀ.ಎನ್.ಸಿ. ಮಾದಯ್ಯ ಉರುಫ್ ಮರದ ಮಹದೇವ ಪಿ.ಸಿ.659, 5ನೇ ಪಡೆ, ಕೆ.ಎಸ್.ಆರ್.ಪಿ. ಮೈಸೂರು, ರವಿ ಬಿನ್ ಪುಟ್ಟೇಗೌಡ, ಸತೀಶ್ ಉರುಫ್ ಶಾಮಿಯಾನ ಸತೀಶ್, ಶ್ರೀ.ನಂದಿ ಶಾಮಿಯಾನ ಅರನಹಳ್ಳಿ, ಮನು ಆರನಹಳ್ಳಿ, ಪ್ರಕಾಶ್ ಆರನಹಳ್ಳಿ, ನಾಗೇಗೌಡ ಹೊಸಹೊಳಲು ಮತ್ತು ಡ್ರೈವರ್ ಮಹದೇವ ಇವರ ಜೊತೆ ಸೇರಿ ಸತೀಶ್ ಎಂಬುವವರ 407 ವಾಹನದಲ್ಲಿ ಶ್ರೀ.ಹನುಮಂತಯ್ಯ, ಆರ್.ಪಿ.ಐ. 5ನೇ ಪಡೆ, ಮೈಸೂರು ಇವರು ಮೈಸೂರಿನ ರಾಘವೇಂದ್ರ ನಗರದಲ್ಲಿ ಹೊಸದಾಗಿ ನಿರ್ಮಿಸುತ್ತಿರುವ ಮನೆಯಿಂದ 11 ಸಾಗುವಾನಿ ನಾಟಾಗಳನ್ನು ತೆಗೆದುಕೊಂಡು ಮೈಸೂರು–ಬನ್ನೂರು ರಸ್ತೆಯಲ್ಲಿ ತೆರಳಿದ್ದು, ಯರಗನಹಳ್ಳಿ ಗ್ರಾಮದ ವ್ಯಾಪ್ತಿಯ ರಸ್ತೆ ಬದಿಯ ಬಾಳೆತೋಟದಲ್ಲಿ ಬಚ್ಚಿಟ್ಟು ಪರಾರಿಯಾಗಿರುತ್ತೀರಿ. ತನ್ಮೂಲಕ, ಸಾಗುವನಿ ಮರದ ಅಕ್ರಮ ಸಾಗಾಟದಲ್ಲಿ ತೊಡಗಿ ತೀವ್ರ ದುರ್ನಡತೆ ಮತ್ತು ಅಶಿಸ್ತು ಪ್ರದರ್ಶಿಸಿರುತ್ತೀರಿ.

10. ನೀವು ದಿನಾಂಕ:4.6.2003ರಂದು ಅಕ್ರಮವಾಗಿ ಯರಗನಹಳ್ಳಿ ವ್ಯಾಪ್ತಿಯ ಬಾಳೆತೋಟವೊಂದರಲ್ಲಿ ಅಡಗಿಸಿಟ್ಟಿದ್ದ 11 ಸಾಗುವಾನಿ ನಾಟಾಗಳನ್ನು ಅರಣ್ಯ ಇಲಾಖೆಯ ಅಧಿಕಾರಿಗಳು ದಿನಾಂಕ:4.6.2003ರಂದು ವಶಪಡಿಸಿಕೊಂಡಿರುತ್ತಾರೆ. ಈ ಬಗ್ಗೆ ನಿಮ್ಮ ಮತ್ತು ಇವರ ಸಂಗಡಿಗರ ವಿರುದ್ಧ ದೊಡ್ಡಬೈರನಕುಪ್ಪೆ ವನ್ಯಜೀವಿ ವಲಯ ಅಧಿಕಾರಿಗಳು ಅರಣ್ಯ ಮೊಕದ್ದಮೆ ಸಂಖ್ಯೆ:05/2003–04 ಕಲಂ 24, 50(2)(ಕೆ), 62, 80 ಕರ್ನಾಟಕ ಅರಣ್ಯ ನಿಯಮ 1969 ಮತ್ತು ಕಲಂ 27, 31, 35(6) ರೆವಿ 50, 51 ವನ್ಯಜೀವಿ ಸಂರಕ್ಷಣಾ ಕಾಯ್ದೆ 1972ರ ಪ್ರಕಾರ ಮೊಕದ್ದಮೆ ದಾಖಲಿಸಿರುತ್ತಾರೆ. ತನ್ಮೂಲಕ ನೀವು ಸಾಗುವಾನಿ ಮರಗಳನ್ನು ಕದ್ದು ಸಾಗಿಸಿ ಅಕ್ರಮವಾಗಿ ಮಾರಾಟ ಮಾಡಲು ಪ್ರಯತ್ನಿಸಿ ತೀವ್ರ ದುರ್ನಡತೆ ಪ್ರದರ್ಶಿಸಿರುತ್ತೀರಿ.

11. ಶ್ರೀ.ಹನುಮಂತಯ್ಯ, ಆರ್.ಪಿ.ಐ. 5ನೇ ಪಡೆ, ಕೆ.ಎಸ್.ಆರ್.ಪಿ. ಮೈಸೂರು, ಆದ ನೀವು ಶ್ರೀ.ಎನ್.ಸಿ.ಮಾದಯ್ಯ ಉರುಫ್ ಮರದ ಮಹದೇವಯ್ಯ, ಪಿ.ಸಿ.659 5ನೇ ಪಡೆ ಮೈಸೂರು ಮತ್ತು ಶ್ರೀ.ಪುಟ್ಟಲಿಂಗೇಗೌಡ ಉರುಫ್ ಶೇಖರ್ ಬಿನ್ ನಿಂಗೇಗೌಡ ಪಿ.ಸಿ.399, 5ನೇ ಪಡೆ, ಕೆ.ಎಸ್.ಆರ್.ಪಿ. ಮೈಸೂರು ಇವರುಗಳಿಗೆ ಅರಣ್ಯದಿಂದ ಸಾಗುವಾನಿ ಮರಗಳನ್ನು ಕದ್ದು ತರುವಂತೆ ಹೇಳಿದ್ದು, ಅದರಂತೆ ಸದರಿದ್ವಯರು ದಿನಾಂಕ:22.5.2003 ರಂದು ರವಿ ಬಿನ್ ಪುಟ್ಟೇಗೌಡ, ಹೊಸಹೊಳಲು, ನಾಗ ಬಿನ್ ಪುಟ್ಟೇಗೌಡ, ಹೊಸಹೊಳಲು, ನಾಗ ಬಿನ್ ಸಖ್ಯ ಹೊಸಹೊಳಲು, ರಾಜ ಇವರುಗಳ ಜೊತೆ ಸೇರಿ ಅಂತರ ಸಂತೆಯ ಉದ್ಬೂರು ವಲಯದಲ್ಲಿ ರಕ್ಷಿತಾರಣ್ಯಕ್ಕೆ ಸೇರಿದ 2 ಸಾಗುವಾನಿ ಮರಗಳನ್ನು ಕಡಿದು ಸತೀಶ್ ಎಂಬುವರಿಗೆ ಸೇರಿದ ವಾಹನ 407ರಲ್ಲಿ ನೀವು ಮೈಸೂರಿನ ರಾಘವೇಂದ್ರ ನಗರದಲ್ಲಿ ಕಟ್ಟಿಸುತ್ತಿರುವ ಮನೆಗೆ ಸಾಗಿಸಿ ನಿಮಗೆ ಕೊಟ್ಟಿರುತ್ತಾರೆ. ತನ್ಮೂಲಕ ನೀವು ನಿಮ್ಮ ಅಧೀನದ ಸಿಬ್ಬಂದಿಯನ್ನು ಮರಗಳ್ಳತನ ಮಾಡಲು ಮತ್ತು ಅವುಗಳನ್ನು ಸಾಗಿಸಲು ಅನುವು ಮಾಡಿಕೊಟ್ಟು ಒಬ್ಬ ಪೊಲೀಸ್ ಅಧಿಕಾರಿಗೆ ಉಚಿತವಲ್ಲದ ರೀತಿಯಲ್ಲಿ ವರ್ತಿಸಿ ಅಧಿಕಾರ ದುರುಪಯೋಗ, ತೀವ್ರ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ.

12. ನಿಮ್ಮ ಪ್ರೋತ್ಸಾಹದಿಂದ ಉದ್ಬೂರು ರಕ್ಷಿತಾರಣ್ಯದಿಂದ ಅಕ್ರಮವಾಗಿ ಕಡಿದು ತಂದು ಕೊಟ್ಟಿದ್ದ ಸಾಗುವಾನಿ ಮರದ ತುಂಡುಗಳನ್ನು ಇವರು ತಮ್ಮ ಪತ್ನಿ ಹೆಸರಿನಲ್ಲಿ ರಾಘವೇಂದ್ರ ನಗರ, ಮೈಸೂರು ಇಲ್ಲಿ ನಿರ್ಮಿಸುತ್ತಿರುವ ಮನೆಯಲ್ಲಿ ಅಡಗಿಸಿಟ್ಟಿದ್ದು, ಸದರಿ ಮರದ ತುಂಡುಗಳನ್ನು ಸಾಗಿಸುವಂತೆ ಶ್ರೀ.ಎನ್.ಸಿ.ಮಾದಯ್ಯ ಉರುಫ್ ಮರದ ಮಹದೇವ, ಪಿ.ಸಿ.659 ಇವರಿಗೆ ಸೂಚಿಸಿದ್ದು, ಅದರಂತೆ ಅವರು ಶ್ರೀ.ಪುಟ್ಟಲಿಂಗೇಗೌಡ ಅಲಿಯಾಸ್ ಶೇಖರ್ ಬಿನ್ ನಿಂಗೇಗೌಡ, ಪಿ.ಸಿ.399, 5ನೇ ಪಡೆ, ಕೆಎಸ್‌ಆರ್‌ಪಿ, ಮೈಸೂರು ರವಿ ಬಿನ್ ಪುಟ್ಟೇಗೌಡ, ಹೊಸಹೊಳಲು ಸತೀಶ್ ಅಲಿಯಾಸ್ ಶಾಮಿಯಾನ ಸತೀಶ್, ಶ್ರೀ.ನಂದಿ ಶಾಮಿಯಾನ, ಅರನಹಳ್ಳಿ, ಪ್ರಕಾಶ ಆರನಹಳ್ಳಿ, ಮನು ಆರನಹಳ್ಳಿ, ನಾಗೇಗೌಡ

ಹೊಸಹೊಳಲು ಮತ್ತು ಡ್ರೈವರ್ ಮಹದೇವ ಇವರುಗಳ ಜೊತೆಗೂಡಿ ದಿನಾಂಕ:4.6.2003ರಂದು ಸತೀಶನಿಗೆ ಸೇರಿದ ವಾಹನ 407ರಲ್ಲಿ ನೀವು ಮೈಸೂರಿನ ರಾಘವೇಂದ್ರ ನಗರದಲ್ಲಿ ಹೊಸದಾಗಿ ಕಟ್ಟಿಸುತ್ತಿರುವ ಮನೆಯಿಂದ 11 ಸಾಗುವಾನಿ ನಾಟಾಗಳನ್ನು ತೆಗೆದುಕೊಂಡು ಮೈಸೂರು-ಬನ್ನೂರು ರಸ್ತೆಯಲ್ಲಿ ಕೊಂಡೊಯ್ಯುತ್ತಿದ್ದಾಗ ಅದೇ ದಿನ ಸಾಯಂಕಾಲ ಅರಣ್ಯಾಧಿಕಾರಿಗಳ ಸದರಿ ವಾಹನವನ್ನು ಹಿಂಬಾಲಿಸಿದಾಗ ಅಕ್ರಮವಾಗಿ ಕೊಂಡೊಯ್ಯುತ್ತಿದ್ದ 11 ಸಾಗುವಾನಿ ಮರಗಳನ್ನು ಯರಗನಹಳ್ಳಿ ವ್ಯಾಪ್ತಿಯ ಬಾಳೆ ತೋಟದಲ್ಲಿ ಅಡಗಿಸಿಟ್ಟು ಪರಾರಿಯಾಗಿರುತ್ತಾರೆ. ತನ್ಮೂಲಕ ನೀವು ನಿಮ್ಮ ಅಧೀನ ಸಿಬ್ಬಂದಿಯನ್ನು ಸಾಗುವಾನಿ ಮರದ ಅಕ್ರಮ ಸಾಗಣೆ ಮಾರಾಟಕ್ಕೆ ಪ್ರಚೋದಿಸಿ, ಅಕ್ರಮ ಚಟುವಟಿಕೆಯಲ್ಲಿ ನೀವು ಭಾಗವಹಿಸಿ, ಅಧಿಕಾರ ದುರುಪಯೋಗ, ತೀವ್ರ ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿರುತ್ತೀರಿ.

13. ನೀವು ಶ್ರೀ.ಎನ್.ಸಿ.ಮಾದಯ್ಯ ಉರುಫ್ ಮರದ ಮಹದೇವ ಮತ್ತು ಪುಟ್ಟಲಿಂಗೇಗೌಡ ಪಿಸಿ-399 ಇವರುಗಳಿಗೆ ಅಂತರಸಂತೆ ಅರಣ್ಯ ವಲಯದಲ್ಲಿ ಸಾಗುವಾನಿ ಮರ-ಗಳನ್ನು ಅನಧಿಕೃತವಾಗಿ ಕಡಿದು, ಅಕ್ರಮವಾಗಿ ಸಾಗಾಣಿಕೆ ಮಾಡಲು ಉತ್ತೇಜಿಸಿರುವುದಲ್ಲದೆ ಅವರುಗಳು ಈ ರೀತಿ ಅರಣ್ಯ ಉತ್ಪನ್ನಗಳನ್ನು ಕದ್ದು ತರುವಾಗ ಮತ್ತು ಕಳ್ಳ ಸಾಗಾಣಿಕೆ ಮಾರಾಟದಲ್ಲಿ ತೊಡಗುವಂತಹ ಸಮಯದಲ್ಲಿ ಅವರನ್ನು ಕರ್ತವ್ಯದಲ್ಲಿದ್ದಂತೆ ತೋರಿಸಿ, ನಕಲಿ ದಾಖಲೆಗಳನ್ನು ಸೃಷ್ಟಿಸಿ ಅಧಿಕಾರ ದುರುಪಯೋಗ, ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿರುತ್ತೀರಿ.

ಈ ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲೆ ಕ್ರಮಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:12-05-2005ರ ಆದೇಶದಲ್ಲಿ ಅರ್ಜಿದಾರರಾದ ಶ್ರೀ ಎನ್.ಸಿ.ಮಾದಯ್ಯ, ಪಿಸಿ-659,ಶ್ರೀ ಹೆಚ್.ಎನ್.ಪುಟ್ಟಲಿಂಗೇಗೌಡ, ಪಿಸಿ-898ರಂದು ಇವರನ್ನು ಸೇವೆಯಿಂದ ವಜಾಗೊಳಿಸಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಮತ್ತೊಬ್ಬ ಆಪಾದಿತ ಅಧಿಕಾರಿಯಾದ ಶ್ರೀ ಹನುಮಂತಯ್ಯ, RPI ಇವರನ್ನು ಕಡ್ಡಾಯ ನಿವೃತ್ತಿಗೊಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿ ಸಲ್ಲಿಸಿರುತ್ತಾರೆ. ಈ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀಯುತ ಹನುಮಂತಯ್ಯ, ಆರ್‌ಪಿಐ, ಇವರು ತಮ್ಮ 25 ವರ್ಷಗಳ ಸೇವಾವಧಿಯಲ್ಲಿ ಯಾವುದೇ ಗುರುತರವಾದ ಆಪಾದನೆಗೆ ಒಳಗಾಗಿರುವುದಿಲ್ಲ. ಅರಣ್ಯದಿಂದ ಮರಗಳನ್ನು ಕಡಿದು ಬಚ್ಚಿಟ್ಟಿದ್ದ ಅಥವಾ ಸಾಗಿಸುವಲ್ಲಿ ಪ್ರಯತ್ನಿಸುವಾಗ ದಸ್ತುಗಿರಿ ಮಾಡಲ್ಪಟ್ಟಿರುವುದನ್ನು ಶ್ರೀ ಎನ್.ಸಿ.ಮಾದಯ್ಯ, ಪಿಸಿ-659 ಹಾಗೂ ಶೇಖರ್ ಬಿನ್ ನಾರಾಯಣ ಹೊಸಹೊಳಲು ಗ್ರಾಮ ಇವರುಗಳು ತಮ್ಮ ಹೇಳಿಕೆಯಲ್ಲಿ ಶ್ರೀ ಹನುಮಂತಯ್ಯ ಆರ್‌ಪಿಐ ಮತ್ತು ಶ್ರೀಯುತ ಪುಟ್ಟಲಿಂಗೇಗೌಡ, ಸಿಪಿಸಿ-399 ಇವರುಗಳು ತಮಗೆ ಮರಗಳನ್ನು ಕಡಿದು ಕಳ್ಳ ಸಾಗಣಿಕೆ ಮಾಡುವಲ್ಲಿ ಪ್ರಚೋದಿಸಿದ್ದಾರೆ ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ. ಎಲ್ಲಿಯೂ ಕೂಡಾ ನೇರವಾಗಿ ಶ್ರೀ ಹನುಮಂತಯ್ಯ ಇವರು ಭಾಗಿಯಾಗಿದ್ದಾರೆ ಎಂದು 24 ಸಾಕ್ಷಿಗಳಲ್ಲಿ ವ್ಯಕ್ತವಾಗಿಲ್ಲ. ಆದ್ದರಿಂದ ಇವರ ಸೇವೆಯನ್ನು ಪರಿಗಣಿಸಿ, ಅಲ್ಲದೆ ಶ್ರೀಯುತರ ಸೇವೆಯನ್ನು ಗುರುತಿಸಿ ರಾಷ್ಟ್ರಪತಿ ಪದಕ್ಕೆ ಶ್ರೀ ಹನುಮಂತಯ್ಯ ಆರ್‌ಪಿಐ ರವರಿಗೆ ಎರಡೂ ಬಾರಿ ಶಿಫಾರಸ್ಸು ಮಾಡಿರುತ್ತಾರೆ ಎಂದು ತಮ್ಮ ಹೇಳಿಕೆಯಲ್ಲಿ ಹೇಳಿರುವುದರಿಂದ ಮತ್ತು 5ನೇ ಪಡೆಯ ಕಮಾಂಡೆಂಟ್ ಮತ್ತು ಸಹಾಯಕ ಕಮಾಂಡೆಂಟ್ ರವರು ಅರ್ಜಿದಾರರು ಸುಳ್ಳು ದಾಖಲಾತಿ ಸೃಷ್ಟಿಸುವುದಕ್ಕೆ ಯಾವುದೇ ದಾಖಲೆಗಳನ್ನು ವಿಚಾರಣಾ ಸಮಯದಲ್ಲಿ ವಿಚಾರಣಾಧಿಕಾರಿಗಳಿಗೆ ಮಂಡಿಸಿರುವುದಿಲ್ಲವಾದ್ದರಿಂದ ಅವರ ಸೇವಾವಧಿಯಲ್ಲಿ ಇದೊಂದೆ ಆಪಾದನೆಗೆ ಒಳಗಾಗಿರುವುದರಿಂದ ಶಿಸ್ತು ಪ್ರಾಧಿಕಾರ ದಿನಾಂಕ:12-05-2005ರಲ್ಲಿ ಶಿಸ್ತು ಪ್ರಾಧಿಕಾರ ವಿಧಿಸಿರುವ ಕಡ್ಡಾಯ ನಿವೃತ್ತಿ ದಂಡನೆಯನ್ನು ಮಾರ್ಪಡಿಸಿ ಸದರಿಯವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಿ ಅವರ ವೇತನವನ್ನು ಆರ್‌ಪಿಐ ಹುದ್ದೆಯ ಕನಿಷ್ಟ ಮಟ್ಟಕ್ಕೆ 10 ವರ್ಷಗಳ ಅವಧಿಗೆ ಇಳಿಸಿ ಈ ಅವಧಿಯಲ್ಲಿ ವಾರ್ಷಿಕ ವೇತನ ಬಡ್ತಿ ಗಳಿಸದಂತೆ ಹಾಗೂ 10 ವರ್ಷಗಳ ದಂಡನಾವಧಿಯ ನಂತರ, ದಂಡನಾದೇಶದ ಹಿಂದನ ದಿನದಂದು ಪಡೆಯುತ್ತಿದ್ದ ವೇತನಕ್ಕೆ ವೇತನ ನಿಗದಿಪಡಿಸಿ ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಹೊಸದಾಗಿ ಗಳಿಸುವ ದಂಡನೆ ವಿಧಿಸಲು ಉದ್ದೇಶಿಸಿದೆ.

ಶ್ರೀ ಹೆಚ್.ಎನ್.ಪುಟ್ಟಲಿಂಗೇಗೌಡ, ಪಿಸಿ ಇವರು 1999ರಲ್ಲಿ ಕರ್ತವ್ಯಕ್ಕೆ ಸೇರಿದ್ದು, ಇದುವರೆವಿಗೂ ಇವರ ವಿರುದ್ಧ ಯಾವುದೇ ಗುರುತರ ಆರೋಪಗಳು ಇದ್ದಂತೆ ಕಂಡುಬರುವುದಿಲ್ಲ. ಇವರನ್ನು ಪ್ರಸ್ತುತ ಪ್ರಕರಣದಲ್ಲಿ ದಸ್ತಗಿರಿ ಮಾಡಿರುವುದಿಲ್ಲ. 24 ಸಾಕ್ಷಿಗಳಲ್ಲಿ ಯಾವುದೇ ಸಾಕ್ಷಿಗಳು ನೇರವಾಗಿ ಆರೋಪಿಸಿದ ಕೃತ್ಯದಲ್ಲಿ ತೊಡಗಿದ್ದರು ಎಂಬ ಬಗ್ಗೆ ಸಾಕ್ಷಿ ನುಡಿದಿರುವುದಿಲ್ಲ. ಮೇಲ್ಕಂಡ ಸಾಕ್ಷಿಗಳ ಹೇಳಿಕೆಗಳಲ್ಲಿ ಇವರ ಹೆಸರು ಮರ ಕಡಿಯುವ ದುಸ್ಕೃತ್ಯದಲ್ಲಿ ಪಾಲ್ಗೊಳ್ಳುತ್ತಿದ್ದರು ಎಂಬ ಬಗ್ಗೆ ಆರೋಪ ವಿದೆಯೇ ವಿನ: ಖುದ್ದಾಗಿ ಈ ಪ್ರಕರಣದಲ್ಲಿ ಭಾಗಿಯಾಗಿದ್ದಾಗ ಸಿಕ್ಕಿಬಿದ್ದಿರುವುದಿಲ್ಲ. ಇವರನ್ನು ಈಗಾಗಲೇ ದಿನಾಂಕ:12-05-2005ರಲ್ಲಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ್ದಾರೆ. ಇಂತಹ ಕಠಿಣ ಶಿಕ್ಷೆಗೆ ಒಳಪಡಿಸಿದರೆ ಇವರು ಹಾಗೂ ಇವರ ಸಂಸಾರ ಹಾಳಾಗುವ ಸಂಬವ ಇರುವುದರಿಂದ ಇವರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿ ಇವರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ 15 ವರ್ಷಗಳ ಅವಧಿಗೆ ಇಳಿಸಿ ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೆ 15 ವರ್ಷಗಳ ನಂತರ, ದಂಡನಾದೇಶದ ಹಿಂದಿನ ದಿನದಂದು ಪಡೆಯುತ್ತಿದ್ದ ವೇತನಕ್ಕೆ ನಿಗದಿಪಡಿಸಿ ಅಲ್ಲಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿ ಗಳಿಸುವ ದಂಡನೆ ವಿಧಿಸಲು ಉದ್ದೇಶಿಸಿದೆ.

ಶ್ರೀ ಎನ್.ಸಿ.ಮಾದಯ್ಯ, ಪಿಸಿ-659 ಇವರು 1993 ರಲ್ಲಿ ಸೇವೆಗೆ ಸೇರಿದ್ದಾರೆ. ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿದಾಗ ಶ್ರೀ ಎನ್.ಸಿ.ಮಾದಯ್ಯ, ಉರುಫ್ ಮರದ ಮಹದೇವ ಇವರು ಈ ಆರೋಪಿತ ಪ್ರಕರಣದಲ್ಲಿ ಪಾಲುದಾರರಾಗಿದ್ದಾರೆ ಎಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಆದರೆ, ದುಸ್ಕೃತ್ಯ ನಡೆದ ಸ್ಥಳದಲ್ಲಿ ಅಥವಾ ಆ ಸಂದರ್ಭದಲ್ಲಿ ಇವರನ್ನು ದಸ್ತಗಿರಿ ಮಾಡಿರುವುದಿಲ್ಲ. ಅರಣ್ಯ ಪ್ರದೇಶದಲ್ಲಿ ಅಲೆದಾಡುತ್ತಿದ್ದಾಗ, ದಸ್ತಗಿರಿ ಮಾಡಿದ್ದಾರೆ. ಅಲ್ಲದೆ ಅರಣ್ಯ ಸಿಬ್ಬಂದಿಯವರಿಗೆ ಇವರ ಸೌಹಾರ್ದತೆ ಅಷ್ಟೊಂದು ಸುಮಧುರವಾಗಿರಲಿಲ್ಲವೆಂದು ಈ

ಕಾರಣದಿಂದ ತಮ್ಮ ಮೇಲೆ ಸುಳ್ಳು ಆರೋಪ ಹೊರಸಿದ್ದಾರೆ ಎಂದು ಹೇಳಿದ್ದಾರೆ. ಸಾಕ್ಷಿಗಳ ಹೇಳಿಕೆಯಲ್ಲಿಯೂ ಕೂಡಾ ಇವರೆ ಆರೋಪಿತರು ಎಂಬ ಬಗ್ಗೆ ಸಂಶಾಯಸ್ಪದ ರೀತಿಯಲ್ಲಿ ಹೇಳಿಕೆ ನೀಡಿರುವುದು ಕಂಡುಬರುತ್ತದೆ. ಎಲ್ಲಿಯೂ ಕೂಡಾ ಮಾಲಿನ ಸಮೇತ ಸಿಕ್ಕಿ ಬಿದ್ದಿರುವುದಿಲ್ಲ. ಆದ್ದರಿಂದ ಇವರು ತಮ್ಮ ಸೇವಾವಧಿಯಲ್ಲಿ ಯಾವುದೇ ಗುರುತರವಾದಂತಹ ಆರೋಪ ಹೊಂದಿಲ್ಲದೆ ಇದ್ದರೂ ಅನಧಿಕೃತವಾಗಿ ಗೈರು ಹಾಜರಾಗಿರುವುದಕ್ಕೆ ದಂಡನೆ ಪಡೆದಿರುತ್ತಾರೆ. ಇದನ್ನು ಹೊರತುಪಡಿಸಿ ಇನ್ನಾವುದೇ ಗಂಭೀರ ಆರೋಪ ಹೊಂದಿಲ್ಲ. ಆದ್ದರಿಂದ ದಿನಾಂಕ:12-05-2005 ರಂದು ಶಿಸ್ತು ಪ್ರಾಧಿಕಾರ ವಿಧಿಸಿದ ಸೇವೆಯಿಂದ ವಜಾಗೊಳಿಸಿದ ದಂಡನೆಯಿಂದ ಇವರ ಸಂಸಾರ ಬೀದಿ ಪಾಲಾಗುವ ಸಂಭವ ಇರುವುದರಿಂದ ಮಾನವತೇಯ ದೃಷ್ಟಿಯಿಂದ ಸೇವೆಯಿಂದ ವಜಾಗೊಳಿಸಿದ ದಂಡನಾದೇಶವನ್ನು ಮಾರ್ಪಡಿಸಿ ಇದೊಂದು ಸಾರಿ ಕೊನೆಯದಾರಿ ಕಣ ದಂಡನೆಯನ್ನು ವಿಧಿಸಬಹುದಾಗಿದ್ದು, ಅದರಂತೆ ಶ್ರೀಯುತ ಪುಟ್ಟಲಿಂಗೇಗೌಡ, ಪಿಸಿ-399 ಇವರಿಗೆ ವಿಧಿಸಬಹುದಾದ ದಂಡನೆಯನ್ನು ವಿಧಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:27-09-2006ರ ತನ್ನ ಪತ್ರದಲ್ಲಿ ಶಿಸ್ತು ಪ್ರಾದಿಕಾರಿಯು ವಿಧಿಸಿರುವ ದಂಡನೆಯನ್ನು ಮಾರ್ಪಡಿಸಿ, ಪರಿಷ್ಕೃತ ದಂಡನೆಯನ್ನು ವಿಧಿಸಬೇಕೆನ್ನುವ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 222 ಪೊಸಿಅ 2006 ಬೆಂಗಳೂರು, ದಿನಾಂಕ:20ನೇ ನವೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:12-05-2005ರ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ರದ್ದುಪಡಿಸಿ, ಶ್ರೀ ಹನುಮಂತಯ್ಯ, ನಿವೃತ್ತ ಆರ್‌ಪಿಐ, ಶ್ರೀ ಹೆಚ್.ಎನ್.ಪುಟ್ಟಲಿಂಗೇಗೌಡ, ಮಾಜಿ ಪಿಸಿ-898, (399) ಹಾಗೂ ಶ್ರೀ ಎನ್.ಸಿ,.ಮಾದಯ್ಯ, ಮಾಜಿ ಪಿಸಿ-659 ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

1) ಶ್ರೀ ಹನುಮಂತಯ್ಯ, ಖಙು ಇವರನ್ನು ಕರ್ತವ್ಯಕ್ಕೆ ಪುನರ್ ನೇಮಕ ಮಾಡಿದೆ.

2) ಇವರ ವೇತನವನ್ನು ಖಙು ಹುದ್ದೆಯ ಕನಿಷ್ಟ ಮಟ್ಟಕ್ಕೆ ಹತ್ತು (10) ವರ್ಷಗಳ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ವಾರ್ಷಿಕ ವೇತನ ಬಡ್ತಿ ಗಳಿಸದೆ, ದಂಡನಾ ಅವಧಿಯ ನಂತರ ದಂಡನಾದೇಶದ ಹಿಂದಿನ ದಿನದಂದು ಪಡೆಯುತ್ತಿದ್ದ ವೇತನಕ್ಕೆ ವೇತನವನ್ನು ನಿಗದಿಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಗಳಿಸತಕ್ಕದ್ದು;

3) ಶ್ರೀ ಹೆಚ್.ಎನ್.ಪುಟ್ಟಲಿಂಗೇಗೌಡ, ಪಿಸಿ-898 (399) ಹಾಗೂ ಎನ್.ಸಿ.ಮಾದಯ್ಯ, ಪಿಸಿ-659 ಇವರುಗಳನ್ನೂ ಸಹ ಸೇವೆಗೆ ಪುನರ್ ನೇಮಕ ಮಾಡಿದೆ.

4) ಇವರಿಬ್ಬರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ ಹದಿನೈದು (15) ವರ್ಷಗಳ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ವಾರ್ಷಿಕ ವೇತನ ಬಡ್ತಿ ಗಳಿಸದೇ, ಹದಿನೈದು (15) ವರ್ಷಗಳ ದಂಡನಾ ಅವಧಿಯ ನಂತರ ದಂಡನಾ ಆದೇಶದ ಹಿಂದಿನ ದಿನದಂದು ಪಡೆಯುತ್ತಿದ್ದ ವೇತನಕ್ಕೆ ವೇತನವನ್ನು ನಿಗದಿಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಗಳಿಸತಕ್ಕದ್ದು;

5) ಇವರಿಬ್ಬರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.

6) ಮೇಲಿನ ಮೂರೂ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳೀಸಿದ/ವಜಾಗೊಳಿಸಿದ ದಿನಾಂಕದಿಂದ ಸೇವೆಗೆ ಪುನರ್ ನೇಮಿಸಿ, ಸೇವೆಗೆ ಹಾಜರಾಗುವ ದಿನಾಂಕದವರೆಗಿನ, ಅವಧಿಯನ್ನು ಅವರ ಹಕ್ಕಿನಲ್ಲಿ ಲಭ್ಯವಿರುವ ರಜೆಯನ್ನು ಮಂಜೂರು ಮಾಡಿ, ರಜೆ ಇಲ್ಲದ ಅವಧಿಗೆ ವೇತನ ರಹಿತ ರಜೆ ಎಂದು ಪರಿಗಣಿಸಿದೆ.

7) ಈ ಆದೇಶವು ಶಿಸ್ತು ಪ್ರಾಧಿಕಾರಿಯ ದಂಡನಾದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಸಂಖ್ಯೆ:PSC 91 CNS 06, ದಿನಾಂಕ:27-09-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1677

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಿ.ಎಸ್.ಮಲ್ಲಿಕಾರ್ಜುನಪ್ಪ, ಆರ್‌ಪಿಐ, ಸಿಎಆರ್, ಮೈಸೂರು ನಗರ ರವರು ಸಲ್ಲಿಸಿರುವ ಮೇಲ್ಮನವಿ ಅರ್ಜಿ ಬಗ್ಗೆ-ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 4/ ಇವಿ/ ಸಿಬ್ಬಂದಿ-2/ 2004-05, ಓಬಿ ಸಂಖ್ಯೆ: 225/ 2005-06, ದಿನಾಂಕ:02.02.2006.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ/8/86/ 2005-06, ದಿನಾಂಕ:19.05.2006.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05.06.2006.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8 /86/2005-06, ದಿನಾಂಕ:18-07-2006.

**ಪ್ರಸ್ತಾವನೆ:**

ಶ್ರೀ ಜಿ.ಎಸ್.ಮಲ್ಲಿಕಾರ್ಜುನಪ್ಪ, RPI ಡಿಎಆರ್ ಮೈಸೂರು ಜಿಲ್ಲೆ, (ಈ ಹಿಂದೆ DAR ದಾವಣಗೆರೆ ಜಿಲ್ಲೆ) ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1. ದಿನಾಂಕ:30-07-2004ರಂದು APC-3, ರೇವಣಸಿದ್ದಪ್ಪ ಇವರು ಪೊಲೀಸ್ ಮಹಾ ನಿರೀಕ್ಷಕರವರ ಕಚೇರಿ ಮತ್ತು ಜಿಲ್ಲಾ ಪೊಲೀಸ್ ಕಚೇರಿಯ ತೀವ್ರ ಕರ್ತವ್ಯವನ್ನು ಸಮವಸ್ತ್ರದಲ್ಲಿ ನಿರ್ವಹಿಸುತ್ತಿದ್ದಾಗ, ಅವರ ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿಸಿದ್ದಾರೆಯೇ ಅಥವಾ ಇಲ್ಲವೇ ಎನ್ನುವುದನ್ನು ವಿವರವಾಗಿ ಪರಿಶೀಲನೆ ಮಾಡದೇ ಏಕಾಏಕಿ ಬಂದು ನೀವು ಮಫ್ತಿಯಲ್ಲಿದ್ದು, ಸುಮಾರು 14-30 ಗಂಟೆಯ ಸಮಯದಲ್ಲಿ ಸದರಿ ಎಪಿಸಿ-3 ರೇವಣಸಿದ್ದಪ್ಪನ ಮೇಲೆ ಹಲ್ಲೆ ಮಾಡಿದ್ದಲ್ಲದೆ, ಚಪ್ಪಲಿ ಕಾಲಿನಿಂದ ಆತನಿಗೆ ಹೊಡೆದು ಅನುಚಿತವಾಗಿ ವರ್ತಿಸಿ, ಕರ್ತವ್ಯದಲ್ಲಿ ಅತೀವ ದುರ್ನಡತೆ ತೋರಿಸಿರುತ್ತೀರೆಂದು ಆಪಾದಿಸಲಾಗಿದೆ."

"2. ನಿಮ್ಮ ಅಧೀನ ಸಿಬ್ಬಂದಿ ತಪ್ಪು ಎಸಗಿದಾಗ ಕೆಎಸ್‌ಪಿ (ಡಿಪಿ) ನಿಯಮಾವಳಿ ಪ್ರಕಾರ ಕ್ರಮ ಕೈಗೊಳ್ಳುವ ಬದಲು ಏಕಾಏಕಿ ಒಬ್ಬ ಅನಾಗರೀಕ ವ್ಯಕ್ತಿ ಸಮಾಜದಲ್ಲಿ ವರ್ತಿಸುವಂತೆ ಹಿರಿಯ ಅಧಿಕಾರಿಯಾಗಿ ನಿಯಮಗಳನ್ನು ಉಲ್ಲಂಘನೆ ಮಾಡಿ, ಹಲ್ಲೆ ಮಾಡಿ, ಚಪ್ಪಲಿ ಕಾಲಿನಿಂದ ಹೊಡೆದು, ಕರ್ತವ್ಯದಲ್ಲಿ ದುರ್ನಡತೆ ಎಸಗಿರುತ್ತೀರೆಂದು ಆಪಾದಿಸಲಾಗಿದೆ."

"3. ಈ ಕಾರಣದಿಂದಾಗಿಯೇ ನಿಮ್ಮ ಅಧೀನ ಸಿಬ್ಬಂದಿಗೆ ದುರುದ್ದೇಶದಿಂದ ಪ್ರತಿನಿತ್ಯ ಕಿರುಕುಳ ಕೊಡುವ ಹವ್ಯಾಸ ಬೆಳೆಸಿಕೊಂಡು, ಸಿಬ್ಬಂದಿಯವರ ಮಾನಸಿಕ ನೆಮ್ಮದಿಯನ್ನು ಹಾಳುಮಾಡಿ ಅಶಾಂತಿಗೆ ಕಾರಣರಾಗಿರುತ್ತೀರೆಂದು ಆಪಾದಿಸಲಾಗಿದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:02-02-2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಅವರ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ತಡೆಹಿಡಿದು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:19-05-2006ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಸಾಕ್ಷ್ಯಾಧಾರಗಳ ಮೂಲಕ ಆರೋಪಗಳು ಸಾಬೀತಾಗಿರುತ್ತವೆ. ಅರ್ಜಿದಾರರು ಒಬ್ಬ ಹಿರಿಯ ಪೊಲೀಸ್ ಅಧಿಕಾರಿಯಾಗಿದ್ದು, ಕಿರಿಯ ಹಾಗೂ ತನ್ನ ಅಧೀನ ಸಿಬ್ಬಂದಿಯ ಜೊತೆ ನಿಯಮಗಳಂತೆ ಸೌಮ್ಯವಾಗಿ ವರ್ತಿಸುವುದನ್ನು ಬಿಟ್ಟು ಹೊಡೆದು, ಬೈದು, ಹಲ್ಲೆ ಮಾಡಿರುವುದು ಪೊಲೀಸ್ ಅಧಿಕಾರಿಯ ದರ್ಪ ತೋರಿಸಿದಂತಾಗಿರುತ್ತದೆ. ಅಧೀನ ಸಿಬ್ಬಂದಿ ತಪ್ಪು ಮಾಡಿದಾಗ ತಿದ್ದಿ ಬುದ್ಧಿ ಹೇಳಿ, ಹೇಗೆ ಮಾಡಬೇಕೆಂದು ತಿಳಿಸಬೇಕು, ಅವರು ಕೇಳದಿದ್ದಾಗ ಅವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಬಹುದಾಗಿರುತ್ತದೆ. ಹಾಗೆ ಮಾಡದೇ ಅಧಿಕಾರ ಇದೆಯೆಂದು ತನ್ನ ಅಧೀನ ಸಿಬ್ಬಂದಿಗೆ ಕಿರುಕುಳ ನೀಡಿರುವುದು ಅರ್ಜಿದಾರರ ದುರ್ನಡತೆಗೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 311 ಪೊಸಿಅ 2006 ಬೆಂಗಳೂರು, ದಿನಾಂಕ:22ನೇ ನವೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಿ.ಎಸ್.ಮಲ್ಲಿಕಾರ್ಜುನಪ್ಪ, ಆರ್‌ಪಿಐ, ಡಿಎಆರ್, ದಾವಣಗೆರೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ:05-06-2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.1687

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ನೇಮಕಾತಿಗೊಂಡ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗಲು ಕಾಲಮಿತಿ ವಿಸ್ತರಣೆ ಕುರಿತು.

**ಓದಲಾಗಿದೆ:** (1) ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 193 ಪಿಪಿಇ 2003 ದಿನಾಂಕ:06.05.2004.

(2) ಅಭ್ಯರ್ಥಿಯ ಮನವಿ ದಿನಾಂಕ:03.07.2004.

(3) ಸರ್ಕಾರದ ಪತ್ರ ಸಂಖ್ಯೆ: ಒಇ 44 ಪಿಪಿಇ 2004 (ಲಾ 100 ಪಿಪಿಇ 2004), ದಿನಾಂಕ:29/30.12.2004.

**ಪ್ರಸ್ತಾವನೆ:**

ನೇಮಕಾತಿ ಸಮಿತಿಯ ಮೂಲಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರ ಹುದ್ದೆಗೆ ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯ ಕ್ರ.ಸಂ.23ರಲ್ಲಿ ನಮೂದಿಸಿರುವ ಶ್ರೀ ಅನಿಲ್‌ಕುಮಾರ್ ಆರ್. ತೊರವಿ, ಶ್ರೀನಗರ, 'ಲಿಂಗರಾಜ', ಹಳಿಯಾಳ ರಸ್ತೆ, ಧಾರವಾಡ-580003 ಇವರನ್ನು ನೇಮಕ ಮಾಡಿ ಅಧಿಕ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕಾರ್ಕಳ ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಿ, ಆದೇಶವನ್ನು ಹೊರಡಿಸಲಾಗಿತ್ತು.

ಸದರಿಯವರು ನೇಮಕಾತಿ ಆದೇಶದನುಸಾರ ನೇಮಕಗೊಂಡ ಹುದ್ದೆಯಲ್ಲಿ ನೇಮಕಾತಿ ಆದೇಶ ಹೊರಡಿಸಿದ ದಿನಾಂಕದಿಂದ 15 ದಿನಗಳ ಒಳಗಾಗಿ ಕರ್ತವ್ಯಕ್ಕೆ ಹಾಜರಾಗಬೇಕಿತ್ತು.

ಸದರಿಯವರು ತಮ್ಮ ಮನವಿ ದಿನಾಂಕ:03.07.2004ರ ಮನವಿಯಲ್ಲಿ ನೇಮಕಗೊಂಡ ಆದೇಶದಲ್ಲಿ ಸ್ಥಳನಿಯುಕ್ತಿ ಮಾಡಿದ ನ್ಯಾಯಾಲಯವನ್ನು ನಿರ್ಧಿಷ್ಟವಾಗಿ ನಮೂದಿಸದೇ ಇರುವ ಕಾರಣ ಸಂಬಂಧಪಟ್ಟ ಅಧಿಕಾರಿಗಳು ನಿರ್ದಿಷ್ಟ ಸ್ಥಳ ನಿಯುಕ್ತಿಯ ಬಗ್ಗೆ ಸ್ಪಷ್ಟೀಕರಣ ಕೋರಲಾಗಿದೆ ಎಂದು ಕರ್ತವ್ಯಕ್ಕೆ ಹಾಜರುಪಡಿಸಿಕೊಂಡಿರುವುದಿಲ್ಲವೆಂದು ನಿವೇದಿಸಿರುತ್ತಾರೆ. ಅಲ್ಲದೆ, ಏಪ್ರಿಲ್ 2004ರಲ್ಲಿ ತನ್ನ ಒಡಹುಟ್ಟಿದ ಸಹೋದರ ಶ್ರೀ ವೀರೇಂದ್ರ ಇವರು ಆಕಸ್ಮಿಕ ಮರಣಹೊಂದಿದ ಕಾರಣದಿಂದಾಗಿ, ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲ, ಆದ

ಕಾರಣ ಸೇರಿಕೆ ಕಾಲವನ್ನು ವಿಸ್ತರಿಸುವಂತೆ ಮೇಲೆ (2)ರಲ್ಲಿ ಓದಲಾದ ಮನವಿಯಲ್ಲಿ ಕೋರಿರುತ್ತಾರೆ. ಇದಕ್ಕೆ ಸಮರ್ಥನೆಯಾಗಿ ಸಹೋದರನ ಮರಣ ಪ್ರಮಾಣ ಪತ್ರವನ್ನು ಸಹ ಹಾಜರುಪಡಿಸಿದ್ದಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 375 ಪಿಪಿಇ 2006, ಬೆಂಗಳೂರು, ದಿನಾಂಕ:27ನೇ ನವೆಂಬರ್, 2006**

ಮೇಲೆ (1)ರಲ್ಲಿ ಓದಲಾಗಿರುವ ಅಧಿಸೂಚನೆ ದಿನಾಂಕ:06.05.2004ರ ಅನುಸಾರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು-ವ- ಸಹಾಯಕ ಸರ್ಕಾರಿ ವಕೀಲರ ಹುದ್ದೆಗೆ ನೇಮಕಗೊಂಡಿರುವ ಶ್ರೀ ಅನಿಲ್‌ಕುಮಾರ್ ಆರ್. ತೊರವಿ, ಶ್ರೀನಗರ, 'ಲಿಂಗರಾಜ' ಹಳಿಯಾಳ ರಸ್ತೆ, ಧಾರವಾಡ ಇವರು ನೇಮಕಗೊಂಡಿರುವ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗುವ ಅವಧಿಯನ್ನು ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 18(2)ರ ಅನುಸಾರ ದಿನಾಂಕ:30.11.2006ರವರೆಗೆ ವಿಸ್ತರಿಸಲಾಗಿದೆ ಮತ್ತು ಸದರಿಯವರನ್ನು ಹಿಂದಿನ ಸ್ಥಳ ನಿಯುಕ್ತಿ ಆದೇಶವನ್ನು ಮಾರ್ಪಡಿಸಿ ಜೆ.ಎಂ.ಎಫ್.ಸಿ. ನ್ಯಾಯಾಲಯ, ಸಿದ್ದಾಪುರ, ಉತ್ತರಕನ್ನಡ ಜಿಲ್ಲೆ, ಇಲ್ಲಿ ಹಾಲಿ ಖಾಲಿ ಇರುವ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಯುಕ್ತಿಗೊಳಿಸಲಾಗಿದೆ.

2. ಸದರಿಯವರು, ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಅವರ ಜೇಷ್ಠತೆಯನ್ನು ಪರಿಗಣಿಸಲಾಗುವುದು ಮತ್ತು ಯಾವುದೇ ಪೂರ್ವಾನ್ವಯವಾಗುವಂತಹ ಸೇವಾ ಸೌಲಭ್ಯಗಳಿಗೆ ಇವರು ಅರ್ಹರಿರುವುದಿಲ್ಲ ಹಾಗೂ ಇದನ್ನು ಪೂರ್ವನಿದರ್ಶನವೆಂದು ಪರಿಗಣಿಸತಕ್ಕದ್ದಲ್ಲ ಹಾಗೂ ಯಾವುದೇ ಕಾರಣಕ್ಕೂ ಈ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ.

3. ಮೇಲೆ (1)ರಲ್ಲಿ ಓದಲಾದ ದಿನಾಂಕ:06.05.2004ರ ಅಧಿಸೂಚನೆಯಲ್ಲಿ ನೇಮಕಾತಿ ಬಗ್ಗೆ ಹೊರಡಿಸಿರುವ ಇತರೇ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ನಿಸಾರ್ ಅಹಮದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

ಪಿ.ಆರ್. 1699

**ವಿಷಯ:** ಶೀ ಮಹಾದೇವ ಕದರಿ, ಹೆಚ್‌ಸಿ-23, ಕೆಎಸ್‌ಆರ್‌ಪಿ., 6ನೇ ಪಡೆ, ಗುಲ್ಬರ್ಗಾರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ-ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆ.ಎಸ್.ಆರ್.ಪಿ, ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/19/2000-01, ದಿನಾಂಕ:04-03-2002.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಹಿಂಬರಹ ಸಂಖ್ಯೆ:ಅಪೀಲು/6/30/2004-05, ದಿನಾಂಕ:20-09-2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:17-12-2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/106/2005, ದಿನಾಂಕ:08-12-2005.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/116/ CNS/2006, ದಿನಾಂಕ:08-11-2006.

**ಪ್ರಸ್ತಾವನೆ:**

ಶೀ ಮಹದೇವ ಕದಿ, ನಾಯಕ್, 6ನೇ ಪಡೆ, ಕೆ.ಎಸ್.ಆರ್.ಪಿ, ಗುಲ್ಬರ್ಗಾ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1. ದಿನಾಂಕ:18-10-2000ರಂದು ಸಮಯ ಸುಮಾರು ರಾತ್ರಿ 8 ಗಂಟೆಗೆ ತುಕಡಿಯ ಇನ್‌ಚಾರ್ಜ್ ಪ್ಲಟೂನ್ ಕಮಾಂಡರ್ ಗೈರುಹಾಜರಿದ್ದದ್ದು ಗೊತ್ತಿದ್ದರೂ, ವಾಹನವನ್ನು ತೆಗೆದುಕೊಂಡು ಹೋಗಲು ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ರವರಿಂದಾಗಲಿ ಅಥವಾ ಕಮಾಂಡೆಂಟ್, 6ನೇ ಪಡೆ, ಕೆ.ಎಸ್.ಆರ್.ಪಿ, ಗುಲ್ಬರ್ಗಾ ರವರಿಂದಾಗಲಿ, ದೂರವಾಣಿ ಮೂಲಕವಾಗಲೀ ಅಥವಾ ನಿಸ್ತಂತು ಸಂದೇಶ್ ಮೂಲಕ ಸಂಪರ್ಕಿಸಿ, ಆದೇಶ ಅಥವಾ ನಿರ್ದೇಶನವನ್ನು ಪಡೆಯಬಹುದಿತ್ತು. ನೀವು ಹಾಗೆ ಮಾಡದೆ, ನೀವು ನಿಮ್ಮ ಮೇಲಾಧಿಕಾರಿಗಳನ್ನು ನಿರ್ಲಕ್ಷಿಸಿ, ನಿಮ್ಮದೇ ಆದ ನಿರ್ಣಯವನ್ನು ತೆಗೆದುಕೊಂಡು, ಕರ್ತವ್ಯದಲ್ಲಿ ಉದ್ಧಟತನದಿಂದ ವರ್ತಿಸಿರುವುದು ಆರೋಪವಾಗಿರುವುದು."

"2. ನೀವು ಹಿರಿಯೂರಿನಿಂದ ಬಿಡುಗಡೆ ಹೊಂದಿ ಗುಲ್ಬರ್ಗಾಕ್ಕೆ ಬರುವಾಗ ಹಿರಿಯೂರಿನಿಂದ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ:4ರಲ್ಲಿ ವಾಹನವನ್ನು ಅತಿವೇಗದಿಂದ ಚಾಲನೆ ಮಾಡಿ, ಒಂದು ಲಾರಿಯನ್ನು ಓವರ್‌ಟೇಕ್ ಮಾಡಿ, ಪೈಪೋಟಿ ಮನೋಭಾವದಿಂದ, ಉದ್ಧಟತನದಿಂದ ಚಾಲನೆ ಮಾಡಿ, ವಾಹನವನ್ನು ಅಜಾಗರೂಕತೆಯಿಂದ ನಡೆಸಿ, ಅಪಘಾತಕ್ಕೆ ಕಾರಣರಾಗಿ ಪಡೆಯ ಓರ್ವ ಮುಖ್ಯ ಪೇದೆ ಮರಣ ಹೊಂದಲು ಮತ್ತು ಇನ್ನಿತರ 22 ಸಿಬ್ಬಂದಿಯವರು ತೀವ್ರತರವಾದ ಗಾಯಾಳುಗಳಾಗಲು ಮುಖ್ಯ ಕಾರಣರಾಗಿ ಅಪರಾಧವೆಸಗಿರುತ್ತೀರಿ."

"3. ನೀವು ಒಬ್ಬ ಜವಾಬ್ದಾರಿಯುತ ಚಾಲಕರಾಗಿದ್ದು, ವಾಹನದ ನಿಯಂತ್ರಣವನ್ನು ಬಲ್ಲವರಾಗಿದ್ದು, ಘಟನಾ ವೇಳೆಯಲ್ಲಿ ಮುಂದೆ ಸಂಭವಿಸಬಹುದಾದ ಅಪಘಾತವನ್ನು ಪೂರ್ವದಲ್ಲಿಯೇ ಗ್ರಹಿಸಿ, ವಾಹನವನ್ನು ಹತೋಟಿಯಲ್ಲಿ ತೆಗೆದುಕೊಂಡು ಈ ಅಪಘಾತವಾಗದಂತೆ ಕನಿಷ್ಟ ಪ್ರಯತ್ನವನ್ನು ಮಾಡದೇ, ಉಳಿದ ಸಿಬ್ಬಂದಿಯವರ ಪ್ರಾಣ ರಕ್ಷಣೆಯನ್ನು ಬದಿಗೊತ್ತಿ, ನಿಮ್ಮ ಪ್ರಾಣ ರಕ್ಷಣೆಗೆ ಹೆಚ್ಚಿನ ಮಹತ್ವವನ್ನು ನೀಡಿರುತ್ತೀರಿ ಇದು ನಿಮ್ಮ ಸೇವಾ ಮನೋಭಾವನೆಯನ್ನು ಪ್ರತಿಬಿಂಬಿಸದೆ, ಸ್ವಾರ್ಥಮನೋಭಾವನೆಯನ್ನು ಪ್ರದರ್ಶಿಸಿ, ಅಪರಾಧ ಎಸಗಿರುತ್ತೀರಿ."

"4. ನೀವು ಲಕ್ಷಾಂತರ ರೂಪಾಯಿ ಸರ್ಕಾರಿ ಆಸ್ತಿಗೆ ಹಾನಿಯನ್ನುಂಟು ಮಾಡಿದ್ದಲ್ಲದೆ, ಸಾರ್ವಜನಿಕ ಆಸ್ತಿಯನ್ನು ಹಾನಿಯನ್ನುಂಟುಮಾಡಿ, ಇಲಾಖೆಗೆ ಕೆಟ್ಟ ಹೆಸರು ಬರುವ ಹಾಗೆ ಮಾಡಿರುವುದು ನಿಮ್ಮ ವಿರುದ್ಧದ ಆರೋಪವಾಗಿರುವುದು."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಒಂದು ಸಾಬೀತಾಗಿರುವುದಿಲ್ಲವೆಂದೂ, ಆರೋಪ-2 ಭಾಗಶ: ಸಾಬೀತಾಗಿದೆ ಎಂದೂ, ಆರೋಪ-3 ಮತ್ತು 4 ಸಾಕ್ಷ್ಯಾಧಾರಗಳಿಂದ ಸಂದೇಹವಿಲ್ಲದೆ ಸಾಬೀತಾಗಿರುತ್ತದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:04-03-2002ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಹವಲ್ದಾರ್ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ವೇತನಕ್ಕೆ ಮೂರು ವರ್ಷಗಳ ಕಾಲ ಸ್ಥಗಿತಗೊಳಿಸಿ, ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಹೊಸದಾಗಿ ಪಡೆಯುವ ದಂಡನೆ ಮತ್ತು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯನ್ನು ವಿಳಂಬವಾಗಿ ಸಲ್ಲಿಸಿರುತ್ತಾರೆಂದು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:20-09-2004ರ ಹಿಂಬರಹದಲ್ಲಿ ಮೇಲ್ಮನವಿಯನ್ನು ಪರಿಶೀಲಿಸಲು ಅವಕಾಶವಿಲ್ಲವೆಂದು ತಿಳಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಲಾರಿ ಚಾಲಕ ಅತೀ ವೇಗವಾಗಿ ಲಾರಿ ಚಾಲನೆ ಮಾಡಿ ಅರ್ಜಿದಾರರ ವಾಹನಕ್ಕೆ ಅಪಘಾತ ಉಂಟು ಮಾಡಿರುವುದೂ, ಅರ್ಜಿದಾರರು ತಮ್ಮ ವಾಹನದ ಬ್ರೇಕ್ ಸರಿಯಾಗಿ ಕೆಲಸ ಮಾಡುತ್ತಿಲ್ಲವೆಂದೂ, ವಾಹನಕ್ಕೆ ರಿಪೇರಿ ಅಗತ್ಯವಿದೆಯೆಂದೂ Special RPI ರವರ ಗಮನಕ್ಕೆ ತರದಿರುವುದೂ, ವಾಹನದಲ್ಲಿ ಪ್ರಯಾಣಿಸುತ್ತಿದ್ದ ಸಿಬ್ಬಂದಿಗಳ್ಯಾರೂ ಅರ್ಜಿದಾರರು ತಮ್ಮ ಸ್ಥಾನ ಬಿಟ್ಟು ಹೊರಗೋಡಿರುವ ಬಗ್ಗೆ ದೂರು ನೀಡಿಲ್ಲದಿರುವುದೂ, ಇಲಾಖಾ ವಿಚಾರಣೆಯಲ್ಲಿ ಲಾರಿ ಚಾಲಕ, ಕ್ಲೀನರ್ ರವರ ಹೇಳಿಕೆ ಪಡೆಯದೇ ಇರುವುದೂ, ನ್ಯಾಯಾಲಯದಲ್ಲಿ ಅರ್ಜಿದಾರರನ್ನು ದೋಷಮುಕ್ತರನ್ನಾಗಿ ಮಾಡಿರುವುದೂ ಎಲ್ಲವನ್ನೂ ಪರಿಶೀಲಿಸಿದ ನಂತರ, ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ, ಕೆಳಕಂಡಂತೆ ಮಾರ್ಪಡಿಸಲು ಸರ್ಕಾರವು ಉದ್ದೇಶಿಸಿದೆ. ಅರ್ಜಿದಾರರು ಅಪಘಾತ ಮಾಡಿರುವರೆಂದಾಗಲಿ, ಪರಾರಿಯಾದರೆಂದಾಗಲಿ ಸಾಕ್ಷಿದಾರರು ನುಡಿದಿರುವುದಿಲ್ಲ. ಆದ್ದರಿಂದ ಬೇಕೆಂತಲೇ ಅಪಘಾತ ಮಾಡಿಲ್ಲದಿರುವುದು, ಅನಿರೀಕ್ಷಿತವಾಗಿ ವೇಗವಾಗಿ ಲಾರಿ ಬಂದಾಗ, ಅಪಘಾತ ಸಂಭವಿಸಿರುವ ಕಾರಣ, ಇನ್ನು ಮುಂದೆ ವಾಹನವನ್ನು ದುರಸ್ತಿಪಡಿಸಿಕೊಂಡು ಜಾಗತೆಯಿಂದ ಚಾಲನೆ ಮಾಡುವಂತೆ 'ಎಚ್ಚರಿಕೆ' ನೀಡಲು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:08-11-2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 329 ಪೊಸಿಅ 2006 ಬೆಂಗಳೂರು, ದಿನಾಂಕ:30ನೇ ನವೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:04-03-2002ರ ಶಿಸ್ತು ಪ್ರಾಧಿಕಾರಿ ಆದೇಶವನ್ನು ರದ್ದುಪಡಿಸಿ, ಶ್ರೀ ಮಹದೇವ ಕದಿ, ಹೆಚ್‌ಸಿ-23, ಹವಲ್ದಾರ್ ಚಾಲಕ, ಕೆ.ಎಸ್.ಆರ್.ಪಿ, 6ನೇ ಪಡೆ, ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:17-12-2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

1) ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳನ್ನು ಸಕಮಗೊಳಿಸಿ, ಬಿಡುಗಡೆ ಮಾಡತಕ್ಕದ್ದು;

2) ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಿ, ವೇತನ ಭತ್ಯೆಗಳನ್ನು ಬಿಡುಗಡೆ ಮಾಡತಕ್ಕದ್ದು;

3) ಇನ್ನು ಮುಂದೆ ವಾಹನವನ್ನು ಚಾಲನೆ ಮಾಡುವ ಮುನ್ನಾ ದುರಸ್ತಿಪಡಿಸಿಕೊಂಡು, ಸರಿಯಾಗಿದೆ ಎಂದು ಖಾತ್ರಿಪಡಿಸಿಕೊಂಡು ಜಾಗತೆಯಿಂದ ಚಾಲನೆ ಮಾಡುವಂತೆ 'ಎಚ್ಚರಿಕೆ' ನೀಡಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:08-11-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1712

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕೆ.ಜಿ.ಸರ್ವೇಶ, ಎಪಿಸಿ-2901, ಡಿ ಕಂಪನಿ, ಸಿಎಆರ್ (ಉತ್ತರ) ಥಣಿಸಂದ್ರ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಉಪ ಪೊಲೀಸ್ ಆಯುಕ್ತರು, ಸಿಎಆರ್, ಉತ್ತರ, ಬೆಂಗಳೂರು ಇವರ ಆದೇಶ ಸಂಖ್ಯೆ:01/ ಡಿಇ/ಆರ್-6/2004-05, ದಿನಾಂಕ:07-10-2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಸಿಎಆರ್, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:35/ಅಪೀಲು/2004, ದಿನಾಂಕ:10-10-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 27-02-2006.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/54/2006-07, ದಿನಾಂಕ:24-07-2006.

**ಪ್ರಸ್ತಾವನೆ:**

ಶ್ರೀ ಕೆ.ಜಿ.ಸರ್ವೇಶ, ಎಪಿಸಿ-2901 'ಡಿ' ಕಂಪೆನಿ, ಸಿಎಆರ್, ಉತ್ತರ ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

"1.ಆರಕ್ಷಕ ಪೇದೆ-2901 ಕೆ.ಜಿ.ಸರ್ವೇಶ 'ಡಿ' ಕಂಪನಿ, ಸಿಎಆರ್ (ಉತ್ತರ) ಥಣಿಸಂದ್ರ ಬೆಂಗಳೂರು ಆದ ಇವರು ದಿನಾಂಕ:03-08-2003 ರಿಂದ 23-02-2004 ರವರೆಗೆ 204 ದಿನಗಳು ಕರ್ತವ್ಯಕ್ಕೆ ಯಾವುದೇ ಪೂರ್ವಾನುಮತಿ ಇಲ್ಲದೆ ಹಾಗೂ ಯಾವುದೇ ರಜೆ ಮಂಜೂರಾತಿ ಪಡೆಯದೇ ನಿಯಮ ಉಲ್ಲಂಘಿಸಿ, ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಇದು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅವರ ಅತೀವ ಅಶಿಸ್ತು ಮತ್ತು ಕರ್ತವ್ಯದಲ್ಲಿನ ಬೇಜವಾಬ್ದಾರಿಯುತ ನಿರ್ಲಕ್ಷತೆಯನ್ನು ಎತ್ತಿ ತೋರಿಸುತ್ತದೆ."

"2. ಆರಕ್ಷಕ ಪೇದೆ-2901 ಕೆ.ಜಿ. ಸರ್ವೇಶ, 'ಡಿ' ಕಂಪೆನಿ, ಸಿಎಆರ್ (ಉತ್ತರ) ಥಣಿಸಂದ್ರ, ಬೆಂಗಳೂರು ಆದ ಇವರು ಜನವರಿ 2003ನೇ ತಿಂಗಳಿನಿಂದ ಕರ್ತವ್ಯಕ್ಕೆ ಬರದೆ, ಡಿಸಿಪಿ, ಸಿಎಆರ್ ಉತ್ತರ, ಬೆಂಗಳೂರು ಇವರಿಗೆ ಪ್ರತಿ ತಿಂಗಳು ರೂ.2000/-ಗಳನ್ನು ಪಾವತಿಸಿರುವುದು, ಯಾವುದೇ ದಾಖಲಾತಿಗಳನ್ನೊದಗಿಸದೆ, ಸುಳ್ಳು ಆರೋಪವನ್ನು ಮಾಡಿ, ಒಬ್ಬ ಜವಾಬ್ದಾರಿಯುತ ಆರಕ್ಷಕನಾಗಿ ಪೊಲೀಸ್ ಸೇವೆಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡಿರುತ್ತಾರೆ. ಇದು ಶಿಸ್ತಿನ ಇಲಾಖೆಯಲ್ಲಿ ಸೇವೆಯನ್ನು ಸಲ್ಲಿಸುತ್ತಿರುವ ಅವರ ಅಶಿಸ್ತು, ಬೇಜವಾಬ್ದಾರಿ ವರ್ತನೆ ಮತ್ತು ಅತೀವ ದುರ್ನಡತೆಯನ್ನು ತೋರಿಸುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಹಾಗೂ ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಸಿಎಆರ್ ಉತ್ತರ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:07-10-2004ರ ಆದೇಶದಲ್ಲಿ ಅರ್ಜಿದಾರರ ಗೈರುಹಾಜರಿ ಅವಧಿ ದಿನಾಂಕ:03-08-2003 ರಿಂದ 23-02-2004 ರವರೆಗೆ ಒಟ್ಟು 204 ದಿನಗಳನ್ನು ವೇತನ ರಹಿತ ರಜೆಯನ್ನಾಗಿ ಪರಿಗಣಿಸಿ, ಇವರ ವೇತನವನ್ನು ಪಿಸಿ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ ಮೂರು ವರ್ಷಗಳ ಕಾಲ ಇಳಿಸಿ, ಮೂರು ವರ್ಷಗಳ ನಂತರ ಹೊಸದಾಗಿ ವಾರ್ಷಿಕ ವೇತನ ಬಡ್ತಿ ಗಳಿಸುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಸಿಎಆರ್, ಬೆಂಗಳೂರು ನಗರ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:10-10-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಆರು ತಿಂಗಳಿಗೂ ಮೀರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿ ಆಗಿರುತ್ತಾರೆ. ಸರ್ಕಾರಿ ಸುತ್ತೋಲೆಯನ್ವಯ ನಾಲ್ಕು ತಿಂಗಳಿಗೂ ಮೀರಿದ ಅನಧಿಕೃತ ಗೈರುಹಾಜರಿಗೆ ವಜಾ ಮಾಡುವ ದಂಡನೆ ವಿಧಿಸಬಹುದಾಗಿರುತ್ತದೆ. ಆದರೂ, ಅರ್ಜಿದಾರರ ಸಮಜಾಯಿಷಿಯನ್ನು ಗಣನೆಗೆ ತೆಗೆದುಕೊಂಡು ಶಿಕ್ಷೆ ವಿಧಿಸಲಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಮೇಲಾಧಿಕಾರಿಗಳಿಗೆ ತಿಳಿಸದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿ ಆಗಿರುವುದು ಇವರ ಬೇಜವಾಬ್ದಾರಿತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 415 ಪೊಸಿಅ 2006 ಬೆಂಗಳೂರು, ದಿನಾಂಕ:4ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಜಿ.ಸರ್ವೇಶ, ಎಪಿಸಿ–2901, 'ಡಿ' ಕಂಪೆನಿ, ಸಿಎಆರ್, ಉತ್ತರ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:27–02–2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1735

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ.ಎನ್.ಸಿದ್ದರಾಜು, ಎಪಿಸಿ–2171, ।ಐ' ಪಂಗಡ, ಸಿಎಆರ್ (ದ) ಬೆಂಗಳೂರು ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ) ಬೆಂಗಳೂರು ಇವರ ಆದೇಶ ಸಂಖ್ಯೆ:51/ಡಿಇ/ಆರ್–6/96–97, ಓಬಿ ಸಂಖ್ಯೆ:112/ 2001–02, ದಿನಾಂಕ:31–10–2001.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:65/ಅಪೀಲು/2001–02, ಓಬಿ ಸಂಖ್ಯೆ:267/2001, ದಿನಾಂಕ:29–12–2001 ಮತ್ತು 23–01–2002.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27–09–2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/133/2005, ದಿನಾಂಕ:22–06–2006 ಮತ್ತು 23–08–2006.

**ಪ್ರಸ್ತಾವನೆ:**

ಶ್ರೀ ಎಂ.ಎನ್.ಸಿದ್ದರಾಜು, ಎಪಿಸಿ–2171, ಐ ಪಂಗಡ, ಸಿಎಆರ್ (ದಕ್ಷಿಣ) ಆಡುಗೋಡಿ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1. ಎಪಿಸಿ–2171 ಶ್ರೀ ಎಂ.ಎನ್.ಸಿದ್ದರಾಜು, 'ಐ' ಪಂಗಡ, ಸಿಎಆರ್ (ದ) ಬೆಂಗಳೂರು, ನೀವು ನಿಮ್ಮ ಹೆಂಡತಿ ಶ್ರೀಮತಿ ಟಿ.ಸಿ.ಗೌರಮ್ಮ, ಎನ್ನುವವರನ್ನು ಈ ಮೊದಲು ಮದುವೆಯಾಗಿ, ಅವರಿಂದ ಎರಡು ಮಕ್ಕಳು ಪಡೆದ ನಂತರ, ಅವರಿಗೆ ತವರು ಮನೆಯಿಂದ ಹೆಚ್ಚಿಗೆ ಹಣ ತರಬೇಕೆಂದು ಒತ್ತಾಯಿಸಿ, ದೈಹಿಕವಾಗಿ ಮತ್ತು ಮಾನಸೀಕವಾಗಿ ಹಿಂಸೆ ನೀಡಿರುವುದಲ್ಲದೆ, ಇವರು ಜೀವಂತ ಇರುವಾಗಲೇ, ಅವರ ಅನುಮತಿಯನ್ನು ಪಡೆಯದೇ, ಇಲಾಖೆಗೂ ಈ ವಿಚಾರವಾಗಿ ಯಾವುದೇ ಮಾಹಿತಿಯನ್ನು ನೀಡಿ, ಅನುಮತಿ ಪಡೆಯದೇ, ಶ್ರೀಮತಿ ಶಶಿಕಲಾ ಎಂಬುವವರನ್ನು ದಿನಾಂಕ:17–09–1999 ರಂದು ಚನ್ನಪಟ್ಟಣದ ಕೆಂಗಲ್ ಹನುಮಂತಯ್ಯ ದೇವಸ್ಥಾನದಲ್ಲಿ ಎರಡನೇ ಮದುವೆ ಮಾಡಿಕೊಂಡಿದ್ದು, ಭಾರತ ದಂಡ ಸಂಹಿತೆಯ ಕಾನೂನನ್ನು ಉಲ್ಲಂಘನೆ ಮಾಡಿ, ಕಾನೂನು ದೃಷ್ಟಿಯಲ್ಲೂ ಅಪರಾಧವೆಸಗಿರುತ್ತೀರಿ."

"2. ಎಪಿಸಿ–2171 ಶ್ರೀ ಎಂ.ಎನ್.ಸಿದ್ದರಾಜು, ಐ ಪಂಗಡ, ಸಿಎಆರ್ (ದ) ನೀವು ಒಬ್ಬ ಸರ್ಕಾರಿ ನೌಕರರಾಗಿದ್ದು, ಇಲಾಖೆಯ ನಿಯಮಗಳನ್ನು ಉಲ್ಲಂಘಿಸಿ, ಶ್ರೀಮತಿ ಶಶಿಕಲಾ ಎನ್ನುವವರನ್ನು ಎರಡನೇ ಮದುವೆಯಾಗುವ ಮೂಲಕ ರಾಜ್ಯ ಗುಣ ಮತ್ತು ನಡತೆ ಕಾಯ್ದೆ 28ಕ್ಕೆ ವ್ಯತಿರಿಕ್ತವಾಗಿ ವರ್ತಿಸಿ, ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ಕಾಯ್ದೆ 3ನ್ನು ಸಹ ಮೀರಿ, ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನೀವು ಕಾನೂನು ಬಾಹಿರ ಕೃತ್ಯವನ್ನು ಎಸಗಿ, ದುರ್ನಡತೆ, ಅಶಿಸ್ತು ಹಾಗೂ ಬೇಜವಾಬ್ದಾರಿಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ನಗರ ಸಶಸ್ತ್ರ ಮೀಸಲು ಪಡೆ, (ದ) ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:31–10–2001ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ನಗರ ಸಶಸ್ತ್ರ ಮೀಸಲು ಪಡೆ, (ದ) ಬೆಂಗಳೂರು, ಇವರು ಮೇಲ್ಮನವಿಯನ್ನು ಪರಿಶೀಲಿಸಿ, ಶಿಸ್ತು ಪ್ರಾಧಿಕಾರಿಯ ಶಿಕ್ಷೆಯನ್ನು ಮಾರ್ಪಡಿಸಿ, ಇವರನ್ನು ದಿನಾಂಕ:29–12–2001ರಲ್ಲಿ ಇವರನ್ನು ಕರ್ತವ್ಯಕ್ಕೆ ಪುನರ್ ನೇಮಕ ಮಾಡಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಮೂರು ವರ್ಷಗಳವರೆಗೆ ಮುಂದೂಡಿ, ಅಮಾನತ್ತಿನ ಅವಧಿಯನ್ನು ಜೀವನಾಧಾರ ಭತ್ಯಕ್ಕೆ ಸೀಮಿತಗೊಳಿಸಿರುತ್ತಾರೆ. ಮುಂದುವರೆದು, ದಿನಾಂಕ:23–01–2002ರ ಆದೇಶದಲ್ಲಿ ಸೇವೆಯಿಂದ ಹೊರಗುಳಿದ ಅವಧಿ ಹಾಗೂ ಸೇವೆಗೆ ಪುನರ್ ನೇಮಕಗೊಂಡು ಕರ್ತವ್ಯಕ್ಕೆ ಹಾಜರಾದ ದಿನಾಂಕದವರೆಗಿನ ಅವಧಿಯನ್ನು ಅವರ ಕೋರಿಕೆಯ ಮೇರೆಗೆ ಅವರ ಲೆಕ್ಕದಲ್ಲಿರುವ ರಜೆ ಎಂದು ಪರಿಗಣಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪಗಳು ಸಾಬೀತಾಗಿರುತ್ತದೆ. ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ನಿಯಮ ಬದ್ಧವಾಗಿದ್ದರೂ, ಮಾನವೀಯತೆಯ ದೃಷ್ಟಿಯಿಂದ ಮೇಲ್ಮನವಿ ಪ್ರಾಧಿಕಾರಿಯವರು 'ಇವರನ್ನು' ಸೇವೆಗೆ ಪುನರ್ ನೇಮಿಸಿ, ದಂಡನೆ ವಿಧಿಸಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಸರ್ಕಾರಿ ನೌಕರರಾಗಿ ಕರ್ತವ್ಯನಿರ್ವಹಿಸುತ್ತಿದ್ದು, ಕೆಸಿಎಸ್ (ನಡತೆ) ನಿಯಮಗಳು 1965ರ ನಿಯಂತ್ರಕ್ಕೆ ಒಳಪಟ್ಟಿದ್ದರೂ, ನಿಯಮಗಳನ್ನು ಉಲ್ಲಂಘಿಸಿ ಮೊದಲನೇ ಪತ್ನಿ ಜೀವಂತವಾಗಿರುವಾಗಲೇ ಎರಡನೇ ಮದುವೆ ಮಾಡಿಕೊಂಡಿರುವುದು ಇವರ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 295 ಪೊಸಿಅ 2006 ಬೆಂಗಳೂರು, ದಿನಾಂಕ:2ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಸ್.ಸಿದ್ದರಾಜು, ಎಪಿಸಿ-2171, 'ಐ' ಪಂಗಡ, ಸಿಎಆರ್ (ದ) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:27-09-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1736

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವೀರಶೆಟ್ಟಿ, ಪಿಸಿ-968, ಬೀದರ್ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್, ಇವರ ಆದೇಶ ಸಂಖ್ಯೆ:3/ಡಿಇ/2004/3955, ಆಪು ಸಂಖ್ಯೆ:395/2005, ದಿನಾಂಕ:18-02-2005.

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 10-10-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27-09-2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/141/2005, ದಿನಾಂಕ:05-05-2006.

**ಪ್ರಸ್ತಾವನೆ:**

ಶ್ರೀ ವೀರಶೆಟ್ಟಿ ಸಿಪಿಸಿ 968, ಬೇಮಲಖೇಡ ಪೊಲೀಸ್ ಠಾಣೆ, ಸದ್ಯ ಔರದ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. "ನೀವು ಸಿಪಿಸಿ-968 ವೀರಶೆಟ್ಟಿ ನಿಮಗೆ ಮೊದಲ ಪತ್ನಿ ಶ್ರೀಮತಿ ಶೋಭಾ ಇವರು ಜೀವಂತ ಇರುವಾಗ, ಸಕ್ಷಮ ಪ್ರಾಧಿಕಾರಿಯವರ ಪೂರ್ವಾನುಮತಿ ಪಡೆಯದೇ, ದಿನಾಂಕ:20-05-2002ರಂದು ಚಿಟ್ಟವಾಡಿ ಗ್ರಾಮದ ಅರ್ಜುನಪ್ಪ ಮಾಮಡಗಿ ಇವರ ಮಗಳು ಶ್ರೀಮತಿ ಲಕ್ಷ್ಮಿ ಎಂಬುವವರನ್ನು ಎರಡನೆಯ ವಿವಾಹವಾಗಿರುವಿರಿ."

2. "ನೀವು ವೀರಶೆಟ್ಟಿ, ಸಿಪಿಸಿ-968 ನಿಮ್ಮ ವಿವಾಹದ ನಂತರ ತನ್ನ ಇಬ್ಬರು ಪತ್ನಿಯವರೊಂದಿಗೆ ಬೇಮಲಖೇಡ ಗ್ರಾಮದ ದಶರಥ ಎಂಬುವವರ ಮನೆಯಲ್ಲಿ ಬಾಡಿಗೆಯಿಂದ ವಾಸಿಸುತ್ತಿದ್ದಾಗ, ದಿನಾಂಕ:06-06-2003ರಂದು 16-30ಗಂಟೆಗೆ ಉಭಯ ಪತ್ನಿಯರು ಜಗಳವಾಡಿ, ಅದೇ ದಿನ 16-00 ಗಂಟೆಗೆ ನೀವು, ನಿಮ್ಮ ಮೊದಲ ಪತ್ನಿ ಶ್ರೀಮತಿ ಶೋಭಾಳೊಂದಿಗೆ ಸೇರಿಕೊಂಡು, 2ನೇಯ ಪತ್ನಿ ಶ್ರೀಮತಿ ಲಕ್ಷ್ಮಿಗೆ ಅಶ್ಲೀಲವಾಗಿ ಬೈದಾಡಿ, ಚಪ್ಪಲಿ ಹಾಗೂ ಕೈಯಿಂದ ಹೊಡೆದು ಗಾಯಪಡಿಸಿರುವಿರಿ."

3. "ಪುನ: ದಿನಾಂಕ:06-06-2003ರಂದು 20-00 ಗಂಟೆಗೆ ನೀವು ಸಿಪಿಸಿ-968 ವೀರಶೆಟ್ಟಿ (ಎಪಿಸಿ-1210 ಶಂಕರ ಸದ್ಯ ಮೃತ ಪಟ್ಟರುತ್ತಾರೆ) ಶಂಕರ ಇಬ್ಬರೂ ಸೇರಿ ಶ್ರೀಮತಿ ಲಕ್ಷ್ಮಿಯ ಕೈ ಹಿಡಿದು, ಎಳೆದಾಡಿ, ಅವಳನ್ನು ಗ್ರಾಮಕ್ಕೆ ಮೋಟಾರ್ ಸೈಕಲ್ ಮೇಲೆ ಕರೆದುಕೊಂಡು ಹೋಗುವಾಗ, ಬಗದಲ ತಾಂಡಾದ ಹತ್ತಿರ ವಾಹನವನ್ನು ನಿಲ್ಲಿಸಿ, ಉಭಯ ಪೇದೆಗಳು ಅವಳಿಗೆ ಕೊಲೆ ಬೆದರಿಕೆ ಹಾಕಿ ಸಿಪಿಸಿ-968 ವೀರಶೆಟ್ಟಿಯವರ ನಿರ್ದೇಶನದ ಮೇರೆಗೆ (ಮೃತ) ಸಿಪಿಸಿ-1210 ಶಂಕರ, ಸದರಿಯವರ ಬಾಯಿ ಒತ್ತಿ ಹಿಡಿದು, ಅವಳ ತವರು ಮನೆಯ ಬಾಗಿಲವರೆಗೆ ಬಿಟ್ಟು ಹೋಗಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ 1,2 ಸಾಬೀತಾಗಿದೆ ಎಂದು ಹಾಗೂ ಆರೋಪ 3 ಭಾಗಶ: ಸಾಬೀತಾಗಿರುವುದಾಗಿ ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್ ಇವರು ಮೇಲೆ ಕಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:18-02-2005ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಮೇಲ್ಮನವಿ ಪ್ರಾಧಿಕಾರಕ್ಕೆ ನಿಗದಿತ ಅವಧಿಯೊಳಗಾಗಿ ಮೇಲ್ಮನವಿ ಸಲ್ಲಿಸದೇ ನೇರವಾಗಿ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿದ್ದು, ಅದನ್ನು ಸಹ ನಿಗದಿತ ಅವಧಿಯೊಳಗೆ ಸಲ್ಲಿಸದೆ, ಅವಧಿ ಮೀರಿದ ನಂತರ ಸಲ್ಲಿಸಿರುತ್ತಾರೆ. ಆದರೂ ಶಿಸ್ತು ಪ್ರಾಧಿಕಾರಿ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶ-ಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಸರ್ಕಾರಿ ಸೇವೆಗೆ ಸೇರಿದ್ದರೂ, ತಾನು ಎರಡನೇ ಮದುವೆ ಆಗಲು ಮೇಲಾಧಿಕಾರಿಗಳ ಅನುಮತಿ ಪಡೆಯಬೇಕೆನ್ನುವುದು ಗೊತ್ತಿಲ್ಲವೆಂದು ತಿಳಿಸಿರುವುದು ಬೇಜವಾಬ್ದಾರಿತನ, ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿದೆ. ನ್ಯಾಯಾಲಯದಲ್ಲಿ ಅರ್ಜಿದಾರರು ಖುಲಾಸೆಗೊಂಡಿದ್ದರೂ, ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುತ್ತದೆ. ಸರ್ಕಾರಿ ಸುತ್ತೋಲೆ ದಿನಾಂಕ:14-09-2001 ರನ್ವಯ ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆ ಸಮಂಜಸವಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 373 ಪೊಸಿಅ 2006 ಬೆಂಗಳೂರು, ದಿನಾಂಕ:4ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೀರಶೆಟ್ಟಿ, ಪಿಸಿ-968, ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:10-10-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1737

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕಣಿಮಪ್ಪ, ಮಾಜಿ ಹೆಚ್‌ಸಿ-251, ಕೊರಟಗೆರೆ ಪೊಲೀಸ್ ಠಾಣೆ, ಇವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಉಲ್ಲೇಖ:**1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು, ಇವರ ಆದೇಶ ಸಂಖ್ಯೆ:ಡಿಇ/19/98, ಓಬಿ ಸಂಖ್ಯೆ:200/1999-2000, ದಿನಾಂಕ:24-08-1999.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು/29/99-2000, ಓಬಿ ಸಂಖ್ಯೆ:13/ 2000-2001, ದಿನಾಂಕ:04-05-2000.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: ಆಗಸ್ಟ್ 2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/105/2005, ದಿನಾಂಕ:19-04-2006.

**ಪ್ರಸ್ತಾವನೆ:**

ಶ್ರೀ ಕಣಿಮಪ್ಪ, ಮಾಜಿ ಪಿಸಿ-251, ಕೊರಟಗೆರೆ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. "ನೀವು ದಿನಾಂಕ:24-08-1998 ರಿಂದ ಮೇಲಾಧಿಕಾರಿಗಳ ಅನುಮತಿಯನ್ನಾಗಲಿ, ಪಡೆಯದೇ, ಅಥವಾ ಯಾವ ತರಹದ ರಜೆಯ ಅರ್ಜಿಯನ್ನಾಗಲಿ ಸಲ್ಲಿಸದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತೀರಿ."

2. "ನಿಮಗೆ ನಿಮ್ಮ ಗೈರುಹಾಜರಿ ಬಗ್ಗೆ ತುಮಕೂರು ಜಿಲ್ಲಾ ಪೊಲೀಸ್ ಅಧೀಕ್ಷಕರು, ತಮ್ಮ ಕಚೇರಿ ಆದೇಶ ಸಂಖ್ಯೆ:ಸಿಬ್ಬಂದಿ/2/553/98-99, ದಿನಾಂಕ:23-11-98, ನೇದರಂತೆ ಪಲಾಯನ ನೋಟೀಸನ್ನು ಹೊರಡಿಸಿದ್ದು, ಅದನ್ನು ನೀವು ದಿನಾಂಕ:29-11-98ರಂದು ಸ್ವೀಕರಿಸಿರುತ್ತೀರಿ. ಪಲಾಯನ ನೋಟೀಸ್ ಜಾರಿಯಾದರೂ ಕೂಡ ಜಾರಿಯಾದ ದಿನದಿಂದ ಒಂದು ತಿಂಗಳ ಒಳಗಾಗಿ ಮಾನ್ಯ ಪೊಲೀಸ್ ಅಧೀಕ್ಷಕರ, ಮುಂದೆ ಹಾಜರಾಗಬೇಕೆಂದು ಸೂಚಿಸಲ್ಪಟ್ಟಿದ್ದರೂ ಕೂಡ ನೀವು ಕರ್ತವ್ಯಕ್ಕೆ ಹಾಜರಾಗದೇ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿ, ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಹಾಗೂ ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:24-08-1999ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:04-05-2000ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮಗೆ ಶಿಕ್ಷೆ ವಿಧಿಸಿದ ಆರು ವರ್ಷಗಳ ನಂತರ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ವಿಳಂಬಕ್ಕೆ ಕಾರಣಗಳನ್ನಾಗಲಿ, ತಮ್ಮ ಅನಧಿಕೃತ ಗೈರುಹಾಜರಿಗೆ ಸಕಾರಣಗಳನ್ನಾಗಲಿ, ಸಮರ್ಥನೀಯ ಕಾರಣಗಳನ್ನಾಗಲಿ ನೀಡಿರುವುದಿಲ್ಲ. ನಿಯಮಾನುಸಾರ ಇಲಾಖಾ ವಿಚಾರಣೆ ನಡೆಸಿದ್ದರೂ, ಇಲಾಖಾ ವಿಚಾರಣೆಗೆ ಹಾಜರಾಗದೆ ದೋಷಪೂರಿತ ವಿಚಾರಣಾ ವರದಿ ಎಂದಿರುವುದು ಬೇಜವಾಬ್ದಾರಿತನ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿ ಅನಧಿಕೃತ ಗೈರು ಹಾಜರಿಯಾಗಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಸಮಂಜಸವಾಗಿರುವುದರಿಂದ ಈ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 214 ಪೊಸಿಅ 2006 ಬೆಂಗಳೂರು, ದಿನಾಂಕ:4ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕಣಿಮಪ್ಪ, ಮಾಜಿ ಹೆಚ್‌ಸಿ-251, ಕೊರಟಗೆರೆ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:ಆಗಸ್ಟ್ 2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1738

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಚಂದನಗೌಡ ಪಾಟೀಲ, ಎಹೆಚ್‌ಸಿ-12, ಕೊಪ್ಪಳ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಉಲ್ಲೇಖ:**1) ಶಿಸ್ತು ಪ್ರಾಧಿಕಾರಿ ಹಾಗೂ ಪೋಲೀಸ್ ಅಧೀಕ್ಷಕರು, ಕೊಪ್ಪಳ, ಇವರ ಆದೇಶ ಸಂಖ್ಯೆ:ಶಿಕ್ಷೆ/72 /2004, ಓಬಿ ಸಂಖ್ಯೆ:485/2004, ದಿನಾಂಕ:06-08-2004.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು/79/ಈವ/2004, ಆಪು ಸಂಖ್ಯೆ:51 /ಈವ/2005/823, ದಿನಾಂಕ:07-02-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 18-04-2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/67/2005, ದಿನಾಂಕ:08-12-2005.

**ಪ್ರಸ್ತಾವನೆ:**

ಶ್ರೀ ಚಂದನಗೌಡ ಪಾಟೀಲ, ಎಹೆಚ್‌ಸಿ-12, ಕೊಪ್ಪಳ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1.ದೋಷರೋಪಣೆ:**

"ನೀವು ನಿಮ್ಮ ಅಧೀನದಲ್ಲಿ ಕರ್ತವ್ಯನಿರ್ವಹಿಸುತ್ತಿರುವ ಶ್ರೀ ಭೀಮಪ್ಪ, ಎಪಿಸಿ-132, ಡಿಎಆರ್, ಕೊಪ್ಪಳ ರವರಿಗೆ ಸುಮಾರು 2 ವರ್ಷಗಳಿಂದ ಅನಾವಶ್ಯಕವಾಗಿ ಕಿರುಕುಳ ಕೊಡುತ್ತಾ, ದೌರ್ಜನ್ಯವೆಸಗುತ್ತಾ, ಹಣ ಕೇಳುವುದು, ಚಹಾ/ತಿಂಡಿ ಪದಾರ್ಥಗಳನ್ನು ಕೊಡಿಸುವಂತೆ ಕೇಳುವುದು ಇತ್ಯಾದಿಯಾಗಿ ತೊಂದರೆಗಳನ್ನು ನೀಡಿ ಮಾನಸಿಕವಾಗಿ ಜರ್ಜರಿತವಾಗುವಂತೆ ಮಾಡಿ ನೀವು ನಿಮ್ಮ ಕರ್ತವ್ಯದಲ್ಲಿ ಅತೀಘೋರ ನಿರ್ಲಕ್ಷತನ, ಬೇಜವಾಬ್ದಾರಿತನ ಮತ್ತು ಅಧೀನ ಸಿಬ್ಬಂದಿಗಳಿಗೆ ಕಿರುಕುಳ ನೀಡುವ ವರ್ತನೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:06-08-2004ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:07-02-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ವಿಚಾರಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಎರಡು ವರ್ಷಗಳಿಂದ ಕಿರುಕುಳ ನೀಡುತ್ತಿರುವುದಾಗಿ ಎಪಿಸಿ-132 ಶ್ರೀ ಭೀಮಪ್ಪ ರವರು ಲಿಖಿತದೂರು ನೀಡಿದ್ದು, ಪೊಲೀಸ್ ಅಧೀಕ್ಷಕರು, ಕೊಪ್ಪಳರವರು ಅರ್ಜಿದಾರರನ್ನು ಕರೆಸಿ ವಿಚಾರಣೆ ಮಾಡಿರುವುದು ಕಂಡುಬರುತ್ತದೆಯೆಂದು ಮೇಲ್ಮನವಿ ಪ್ರಾಧಿಕಾರಿ ತಮ್ಮ ಆದೇಶದಲ್ಲಿ ತಿಳಿಸಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 104 ಪೊಸಿಅ 2006 ಬೆಂಗಳೂರು, ದಿನಾಂಕ:5ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಚಂದನಗೌಡ ಪಾಟೀಲ, ಎಹೆಚ್‌ಸಿ-12, ಕೊಪ್ಪಳ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:18-04-2005ರಂದು ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1739

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕೆ.ಅಜ್ಜಣ್ಣ, ಡಿಎಸ್‌ಪಿ, ಹೆಚ್&ಬಿ ಸಿಓಡಿ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ - ಆದೇಶ.

**ಉಲ್ಲೇಖ:**1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರ ಆದೇಶ ಸಂಖ್ಯೆ:ಸಿಬಿ/5/ 26/2005-06, ದಿನಾಂಕ:14-10-2005.

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 18-01-2006.

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/5/25/2003-04, ದಿನಾಂಕ:31-05-2006.

**ಪ್ರಸ್ತಾವನೆ:**

ಶ್ರೀ ಕೆ.ಅಜ್ಜಣ್ಣ, ಡಿಎಸ್‌ಪಿ, ಹೆಚ್&ಬಿ, ಸಿಓಡಿ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೊಷರೋಪಣಾ ಪತ್ರ ಹೊರಡಿಸಲಾಗಿದೆ.

**1.ದೋಷರೋಪಣೆ:**

"ನೀವು ಹಿಂದೆ ಪಿಐ ಆಗಿ ಬೆಂಗಳೂರು ನಗರದ ಯಶವಂತಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಮೊಕದ್ದಮೆ ಸಂಖ್ಯೆ:332/99ರಪ್ರಕರಣದ ತನಿಖೆಯನ್ನು ಸರಿಯಾಗಿ ನಿರ್ವಹಿಸದೆ, ಕರ್ತವ್ಯ ನಿಷ್ಠೆಯನ್ನು ತೋರದೆ, ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಕರ್ತವ್ಯ ಚ್ಯುತಿ ಮತ್ತು ಕರ್ತವ್ಯ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:14-10-2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ವಿಚಾರಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಎಷ್ಟು ದಿನಗಳ ಕಾಲ ಪ್ರಭಾರದಲ್ಲಿದ್ದರೆಂಬುದು ಮುಖ್ಯವಲ್ಲ. ಆದರೆ, ಅವರ ಪ್ರಭಾರಾವಧಿಯಲ್ಲಿ ದೋಷಾರೋಪಣೆ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸುವಾಗ ನಾಲ್ಕು ಆರೋಪಿಗಳಲ್ಲಿ ಆರೋಪಿ 1 ಮತ್ತು 4 ರವರುಗಳನ್ನು ಮಾತ್ರ ದೋಷಾರೋಪಣಾ ಪಟ್ಟಿಯಲ್ಲಿ ಸೇರಿಸಿದ್ದು, ಉಳಿದ ಆರೋಪಿ 2 ಮತ್ತು 3 ರವರುಗಳನ್ನು ದೋಷಾರೋಪಣಾ ಪಟ್ಟಿಯಲ್ಲಿ ಸೇರಿಸದೇ ಕೈ ಬಿಟ್ಟಿರುವುದು ಕಂಡುಬರುತ್ತದೆ. ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ತಮಗೆ ವಹಿಸಿದ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸದಿರುವ ಕಾರಣ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 298 ಪೊಸಿಅ 2006 ಬೆಂಗಳೂರು, ದಿನಾಂಕ:5ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಅಜ್ಜಣ್ಣ, ಡಿವೈ.ಎಸ್.ಪಿ., ಹೆಚ್ ಅಂಡ್ ಬಿ, ಸಿಒಡಿ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ:18-01-2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1740

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ಎಸ್.ರಾಮಮೋಹನ್, ಸಿಪಿಐ, ಯಲಬುರ್ಗಾ ವೃತ್ತ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ-ಆದೇಶ.

**ಉಲ್ಲೇಖ:**1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ, ಇವರ ಆದೇಶ ಸಂಖ್ಯೆ:ಶಿಕ್ಷೆ/5/2005, ಓಬಿ ಸಂಖ್ಯೆ:87/2005, ದಿನಾಂಕ:07-11-2004-2005.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು/ 30/ಈವ/ 2005, ಆಪು ಸಂಖ್ಯೆ:232 /ಈವ /2005, ದಿನಾಂಕ:07-06-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04-07-2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ /8/36/2005-06, ದಿನಾಂಕ:22-12-2005.

**ಪ್ರಸ್ತಾವನೆ:**

ಶ್ರೀ ಬಿ.ಎಸ್.ರಾಮಮೋಹನ, ಸಿಪಿಸಿ, ಯಲಬುರ್ಗಾ ವೃತ್ತ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1.ದೋಷರೋಪಣೆ:**

"ನೀವು ದಿನಾಂಕ:05-02-2005, 07-02-2005 ರಿಂದ 09-02-2005ರವರೆಗೆ 4 ದಿವಸ-ಗಳ ಆಕಸ್ಮಿಕ ರಜೆ ಮತ್ತು ದಿನಾಂಕ:06-02-2005ರಂದು 1 ದಿನದ ಸರ್ಕಾರಿ ರಜೆಯ ಅನುಮತಿ ಸೇರಿದಂತೆ ಒಟ್ಟು 5 ದಿನಗಳ ರಜೆ ಮಂಜೂರಾತಿ ನೀಡಲು ಕೋರಿ ಅರ್ಜಿ ಸಲ್ಲಿಸಿ, ಮೇಲಾಧಿಕಾರಿಗಳ ಅನುಮತಿ ಪಡೆಯದೇ ಅನಧಿಕೃತವಾಗಿ ರಜೆಯ ಮೇಲೆ ತೆರಳಿ ನೀವು ನಿಮ್ಮ ಕರ್ತವ್ಯದಲ್ಲಿ ಶಿಸ್ತನ್ನು ಉಲ್ಲಂಘಿಸಿ, ಅತೀವ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿ ವರ್ತನೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:07/11/2004-05ರ ಆದೇಶದಲ್ಲಿ ಅರ್ಜಿದಾರರ ಅನಧಿಕೃತ ಗೈರುಹಾಜರಾದ ಅವಧಿಯನ್ನು (ದಿನಾಂಕ:05-02-2005 ರಿಂದ 09-02-2005ರವರೆಗೆ) 'ವೇತನ ರಹಿತ ರಜೆ' ಎಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:07-06-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ವಿಚಾರಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪೊಲೀಸ್ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಪೂರ್ವಾನುಮತಿ ಪಡೆಯದೇ ರಜಾ ಅರ್ಜಿಯನ್ನು ನೀಡಿ, ರಜೆಯ ಮೇಲೆ ತೆರಳಿದ್ದು, ಕಚೇರಿಯಲ್ಲಿ ಜರೂರಾಗಿ ನಿರ್ವಹಿಸುವ ಕರ್ತವ್ಯಗಳನ್ನು ಬದಿಗೊತ್ತಿದ್ದ ಕಾರಣ, ರಜೆ ಮಂಜೂರು ಮಾಡಿಲ್ಲದಿರುವುದು ಕಂಡು ಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಪೂರ್ವಾನುಮತಿ ಪಡೆಯದೇ ರಜೆಯ ಮೇಲೆ ತೆರಳಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 80 ಪೊಸಿಅ 2006 ಬೆಂಗಳೂರು, ದಿನಾಂಕ:5ನೇ ಡಿಸೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಎಸ್.ರಾಮಮೋಹನ್, ಸಿಪಿಐ ಯಲಬುರ್ಗಾ ವೃತ್ತ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:04-07-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1741

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

